ಸರಕಾರದಿಂದ ಪಠ್ಯಪುಸ್ತಕವೆಂದು ಮಂಜೂರಾದ

# ಸತ್ಕಥಾಲಾಪ.



ಮ. ಪ್ರ. ಪೂಜಾರ.

# SATKATHALAPA.

BY

M. P. PUJAR,

# ಸತ್ಕಥಾಲಾಪ.



**ಮಹಾದೇವ ಪ್ರಭಾಕರ ಪೂಜಾರ,**

ಕನ್ನಡಪಂಡಿತ, ಟ್ರೇನಿಂಗ್ ಕಾಲೇಜ್

ಫಾರ್ ಮೆನ್, ಧಾರವಾಡ

ಇವರಿಂದ

ಸಂಕಲಿತವಾದುದು.




೪ನೆಯ ಮುದ್ರಣ

**೧೯೩೯.**



**ಬೆಲೆ:—೮ ಆಣೆ.**

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

# ಪರಿವಿಡಿ.




| ಅ. ಸಂ. | ವಿಷಯ | ಪುಟ. |
|---|---|---|
| ೧ | ಉದ್ದಾಲಕ ... | ೧ |
| ೨ | ಜಪಾನಿ ಕೂಲಿಕಾರನ ತಾಯಿ | ೨ |
| ೩ | ಬಂಡಿಹೊಡೆವ ಶೀಖನ ಆತ್ಮಾರ್ಪಣ | ೩ |
| ೪ | ದಧೀಚಿಋಷಿ ... | ೪ |
| ೫ | ಹಾತೆಮ್ ... | ೬ |
| ೬ | ಹೊಲೆಯ ಸಿದ್ದನಾಕ ... | ೭ |
| ೭ | ಮಹಾತ್ಮನಾದ ಅಲಿ ... | ೯ |
| ೮ | ಮೈಥಿಲ ಪಂಡಿತ ... | ೧೦ |
| ೯ | ಬಿಸ್ಮಾರ್ಕನ ಚಿರೂಟು ... | ೧೧ |
| ೧೦ | ಬಗದಾದದ ನಾವಲಿಗ ... | ೧೨ |
| ೧೧ | ವಿಶ್ವಾಮಿತ್ರನೂ ವಶಿಷ್ಠನೂ | ೧೩ |
| ೧೨ | ಹಿಂದು ಸಂನ್ಯಾಸಿಯೂ ಸಿಕಂದರನೂ | ೧೪ |
| ೧೩ | ಐದುಜನ ಶೀಖರು ... | ೧೫ |
| ೧೪ | ಮಹಾತ್ಮನಾದ ಅಲಿ ... | ೧೭ |
| ೧೫ | ವಾಶಿಂಗ್ಟನ್ ... | ೧೮ |
| ೧೬ | ಸೂಜಿಯ ಎಜ್ಜದಲ್ಲಿ ಆನೆ ... | ೧೮ |
| ೧೭ | ಬೆಲ್ಲ ತಿನ್ನುವ ಹುಡುಗ ... | ೧೯ |
| ೧೮ | ಶಾಯಿಲಕ್ ... | ೨೦ |
| ೧೯ | ಇಟಲಿಯ ರಾಣಿ ... | ೨೧ |
| ೨೦ | ಉಪಮನ್ಯು ... | ೨೨ |
| ೨೧ | ಮಿ. ಆಡ್ಯಾಮ್ಸ ... | ೨೫ |
| ೨೨ | ಒಬ್ಬ ಶಿವಭಕ್ತ ... | ೨೫ |
| ೨೩ | ಔರಂಗಜೇಬನೂ ಫಕೀರ ಸಮರ್ದನೂ | ೨೭ |
| ೨೪ | ಹಾಯ್ಲಂಡದ ಬಾಲಕ ... | ೨೮ |
| ೨೫ | ಮಹಾತ್ಮನಾದ ಇಬ್ರಾಹೀಮ್ | ೨೯ |
| ೨೬ | ಭೂತವಶೀಕರಣ ... | ೩೦ |
| ೨೭ | ಬಗದಾದದ ಖಲೀಫ ... | ೩೨ |
| ೨೮ | ರೇಗುಲಾಸ ... | ೩೨ |
| ೨೯ | ದೇವಹೂತಿ ... | ೩೪ |
| ೩೦ | ಆರಿಸ್ಟಾಯಿಡಿಸ್ ... | ೩೫ |
| ೩೧ | ಬಲೆಗಾರನು ... | ೩೬ |
| ೩೨ | ವಿಕ್ಟೋರಿಯಾ ಮಹಾರಾಣಿ | ೩೭ |
| ೩೩ | ಫಕೀರ ... | ೩೮ |
| ೩೪ | ಕರಂದೀಕರ ರಾಮಜಿರಾಯರು | ೪೦ |
| ೩೫ | ಶ್ರೀಮಚ್ಛಂಕರಾಚಾರ್ಯರು | ೪೧ |
| ೩೬ | ಮಿಸೆಸ್ ಚಾಪ್‌ಲೀನ್ ... | ೪೨ |
| ೩೭ | ಒಬ್ಬ ಕಾಮದಾರನು ... | ೪೩ |
| ೩೮ | ಸ್ಟೀಫನ್‌ಸನ್ ... | ೪೪ |
| ೩೯ | ದ್ರೌಪದಿಯ ಸಾಧುದರ್ಶನ | ೪೫ |
| ೪೦ | ಪ್ರಭುಣೆ ರಾಮಶಾಸ್ತ್ರಿಗಳು | ೪೬ |
| ೪೧ | ಪ್ರಭುಣೆ ರಾಮಶಾಸ್ತ್ರಿಗಳು | ೪೭ |
| ೪೨ | ಪ್ರಭುಣೆ ರಾಮಶಾಸ್ತ್ರಿಗಳು | ೪೮ |
| ೪೩ | ಮುಖಮುಂಶಾ ... | ೪೯ |
| ೪೪ | ಲಾರ್ಡ ಸ್ಟೇಯರ್ ... | ೫೧ |
| ೪೫ | ಸುಲ್ತಾನ್ ಸುಲೇಮಾನ ... | ೫೦ |
| ೪೬ | ಯುಧಿಷ್ಠಿರ ... | ೫೧ |
| ೪೭ | ೪ನೆಯ ಹೇನ್ರಿಯೂ ಶಿರಿಕನೂ | ೫೨ |
| ೪೮ | ಖಲೀಫನಾದ ಉಮರ ... | ೫೩ |
| ೪೯ | ರಂತಿದೇವ ... | ೫೪ |
| ೫೦ | ನಾಸೀರ್ ಉದ್ದೀನ ... | ೫೫ |
| ೫೧ | ಶಹ ಅಬ್ಬಾಸನ ಕಥೆ ... | ೫೫ |
| ೫೨ | ಶ್ರೀದೇವೇಂದ್ರನಾಥ ಠಾಕುರ | ೫೬ |
| ೫೩ | ಕಾಪೋತಿ ... | ೫೮ |

| | | |
|---|---|---|
| ೫೪ | ಬಿಶಪ್ ವುಯಿಲ್ಯಮ್ ... | ೫೯ |
| ೫೫ | ಪುಂಡರೀಕ ... | ೬೧ |
| ೫೬ | ರೋಮನ್ ಸಹರಿಯುಸ | ೬೩ |
| ೫೭ | ಅರಿಸ್ಟಾ ಇಡಿಸ್ ... | ೬೪ |
| ೫೮ | ದಾಮಾಜಿಪಂತ ... | ೬೫ |
| ೫೯ | ಮಹಾತ್ಮನಾದ ಉಮರ ... | ೬೬ |
| ೬೦ | ಹರಿಶ್ಚಂದ್ರ ಮಹಾರಾಜ ... | ೬೮ |
| ೬೧ | ಒಬ್ಬ ಅರಬ ... | ೬೯ |
| ೬೨ | ಯಕ್ಷಪ್ರಶ್ನಗಳು ... | ೭೦ |
| ೬೩ | ಸ್ವೀಡನದ ಔಷಧಾಲಯ ... | ೭೩ |
| ೬೪ | ಬಗದಾದದ ಕಾಜಿ ... | ೬೩ |
| ೬೫ | ಕೃಷ್ಣಾತೀರದ ಒಂದು ಸರ್ಪ | ೭೪ |
| ೬೬ | ಶಿವಾಜಿಮಹಾರಾಜರು ... | ೭೫ |
| ೬೭ | ಅಮೇರಿಕದ ಇಂಡಿಯನ್ | ೭೬ |
| ೬೮ | ನಿಪ್ಪಾಣಿಯ ಅಪ್ಪಾಸಾಹೇಬ | ೭೭ |
| ೬೯ | ಅಮೇರಿಕದ ಗ್ರ್ಯಾಜುಯೇಟ್ | ೭೮ |
| ೭೦ | ಧರ್ಮರಾಜ ... | ೮೦ |
| ೭೧ | ಡೇವ್ಹಿಡ್‌ರಾಜ ... | ೮೨ |
| ೭೨ | ಅರ್ಜುನನ ಪರೀಕ್ಷೆ ... | ೮೪ |
| ೭೩ | ವಿಂಕೇಲ್ ರೀಡ್ ... | ೮೬ |
| ೭೪ | ಮೇವಾಡದಲ್ಲಿ ... | ೮೭ |
| ೭೫ | ಫಡಕೆ ಹರಿಪಂತ ... | ೮೮ |
| ೭೬ | ಭರ್ತೃಹರಿ ... | ೮೮ |
| ೭೭ | ರಾಮರಡ್ಡಿಯ ಮಕ್ಕಳು ... | ೮೯ |
| ೭೮ | ಹಜರತ ಹುಸೇನ ... | ೯೦ |
| ೭೯ | ಬಾಜಿಪ್ರಭು ದೇಶಪಾಂಡೆ | ೯೧ |
| ೮೦ | ಜರ್ಮನಿಯ ಒಕ್ಕಲಿಗ ... | ೯೩ |
| ೮೧ | ಕಾಸಾಬಿಯಾಂಕಾ ... | ೯೪ |
| ೮೨ | ಬಲಿಚಕ್ರವರ್ತಿ ... | ೯೫ |
| ೮೩ | ಜಯಮತೀರಾಣಿ ... | ೯೬ |
| ೮೪ | ೩ನೆಯ ವಿಲ್ಯಮ್ ... | ೯೮ |
| ೮೫ | ಬೆಟ್ಟಗೇರಿ ಕೃಷ್ಣಶಾಸ್ತ್ರಿಗಳು | ೯೯ |
| ೮೬ | ಇಂಗ್ಲಿಶ್ ಆಫಿಸರ್ ... | ೧೦೧ |
| ೮೭ | ನೀಲಗುಂದದ ಗದಿಗಯ್ಯನವರು | ೧೦೧ |
| ೮೮ | ಸರಗುಂದದ ಸಾವಿತ್ರೀಬಾಯಿ | ೧೦೩ |
| ೮೯ | ಪಿಟೀಲುವಾದನ ಪಟು | ೧೦೪ |
| ೯೦ | ಸಖಾರಾಮ ಬಾಪು ... | ೧೦೫ |
| ೯೧ | ಬಂಗಾರದ ಬಟ್ಟಲು ... | ೧೦೫ |
| ೯೨ | ರೇಟರೆಯ ತ್ರ್ಯಂಬಕರಾಯ | ೧೦೬ |
| ೯೩ | ಪುರಂದರೆ ಜೋಯಿಸರು ... | ೧೦೮ |
| ೯೪ | ಗಜ್‌ಮ್ಯಾನ್ ... | ೧೦೯ |
| ೯೫ | ಧನಶೆಟ್ಟಿಯೂ ಅವನ ಮಕ್ಕಳೂ | ೧೧೦ |
| ೯೬ | ಕ್ಯಾಲೇಪಟ್ಟಣದ ನಾಗರಿಕರು | ೧೧೨ |
| ೯೭ | ಶಿರಸಂಗಿ ಅಪ್ಪಾಸಾಹೇಬ | ೧೧೩ |
| ೯೮ | ಮ್ಯಾನ್‌ಲಿಯುಸ್ ಟರ್ಕೋಯಾಟಸ | ೧೧೪ |
| ೯೯ | ಡಾಕ್ಟರ್ ಹೇ ... | ೧೧೬ |
| ೧೦೦ | ಮಹಾತ್ಮನಾದ ಮಾರುಫ | ೧೧೬ |
| ೧೦೧ | ಅಇಯಾಜ್ ... | ೧೧೭ |
| ೧೦೨ | ನೆಪೋಲಿಯನ್ ... | ೧೧೮ |
| ೧೦೩ | ಮಣಿಕರ್ಣಿಕಾಸ್ನಾನ ... | ೧೧೯ |
| ೧೦೪ | ಸತ್ಯ ಹೇಳಿದ ಕಳ್ಳನು ... | ೧೨೦ |
| ೧೦೫ | ೨೪ ಜನ ಗುರುಗಳು ... | ೧೨೧ |

# ಮುನ್ನುಡಿ.

ಶ್ರೀಮದ್ಭಾಗವತದಲ್ಲಿ ಯದುಮಹಾರಾಜನು, ಬಾಲಕರಂತೆ ಯಾವಾಗಲೂ ವಿಮಲಾನಂದದಲ್ಲಿರುವ ದತ್ತಾವಧೂತರನ್ನು ಕಂಡು ನಿಮಗೆ ಈ ತರದ ಆನಂದವೃತ್ತಿಯು ಹೇಗೆ ಲಭಿಸಿತೆಂದು ಕೇಳಿದಾಗ ಅವರು ಪೃಥ್ವಿ, ವಾಯು ಮೊದಲಾದ ೨೪ ಗುರುಸ್ಥಾನಗಳಲ್ಲಿ ಒಂದರಿಂದೊಂದರಿಂದ ಒಂದೊಂದು ಗುಣವನ್ನು ಕಲಿತುಕೊಂಡು ಈ ಸ್ಥಿತಿಯನ್ನು ಹೊಂದಿದೆನೆಂದು ಹೇಳಿದಂತೆ ಒಂದು ಕಥೆಯುಂಟು. ಹಾಗೆಯೇ ಮನುಷ್ಯನಲ್ಲಿ ಶೀಲವುಂಟಾಗುವುದಕ್ಕಾದರೂ ಆತನು ಹಲವು ಸುಗುಣಗಳನ್ನು ಹಲವು ಕಡೆಗಳಿಂದ ಕಲಿತುಕೊಳ್ಳಬೇಕಾಗುವುದು. ಎಲ್ಲ ವಿಧದಲ್ಲಿಯೂ ಮಾದರಿಯಾಗಿರುವ ಒಂದೇ ಸ್ಥಲವು ಸಿಕ್ಕುವುದು ದುರ್ಲಭವು. ಒಂದೆಡೆಗೆ ಸತ್ಯವನ್ನು, ಇನ್ನೊಂದೆಡೆಗೆ ಪರೋಪಕಾರವನ್ನು, ಮತ್ತೊಂದೆಡೆಗೆ ದಯೆಯನ್ನು ನೋಡಿ ಮನುಷ್ಯನು ಅವುಗಳನ್ನು ಅನುಕರಿಸುವನು. ಹೀಗೆ ಗುಣಗಳನ್ನನುಕರಿಸುವಾಗ ಆ ಗುಣಗಳು ತನಗೆ ಎಷ್ಟುಮಟ್ಟಿಗೆ ಶಕ್ಯವೆಂಬುದನ್ನೂ ಆತನು ನೋಡುವನು. ಆದರೆ ಆ ಸುಗುಣಗಳು ಉತ್ಕಟವಾಗಿ ಬೇರೂರಿ ನಿಂತ ಹೊರತು ಅವು ಕಾರ್ಯಗಳಲ್ಲಿ ಪರಿಣತವಾಗುವುದಿಲ್ಲ. ಕಾರ್ಯಗಳಲ್ಲಿ ಪರಿಣಮಿಸುವಂತೆ ಸುಗುಣಗಳು ಮನುಷ್ಯನಲ್ಲಿ ಒಡಮೂಡಬೇಕಾದರೆ ಆ ಸುಗುಣಗಳ ಪೂರ್ಣವಿಕಸಿತ ಸ್ವರೂಪದ ಉದಾಹರಣಗಳು ಆತನ ಕಣ್ಣಿಗೆ ಕಟ್ಟಿರಬೇಕಾಗುವುದು.

ನಮ್ಮ ಪುರಾಣಗಳು ಈ ಕೆಲಸವನ್ನೇ ಮಾಡಿದುವು. ಸತ್ಯ, ಪರೋಪಕಾರ, ಕ್ಷಮೆ, ಪಿತೃಭಕ್ತಿ, ಪ್ರಭುಭಕ್ತಿ ಮೊದಲಾದ ಗುಣಗಳ ಪೂರ್ಣವಿಕಸಿತಸ್ವರೂಪವನ್ನು ಹರಿಶ್ಚಂದ್ರ, ರಂತಿದೇವ, ಧರ್ಮರಾಜ, ರಾಮಚಂದ್ರ ಮಾರುತಿ ಮೊದಲಾದವರ ಉದಾಹರಣಗಳಲ್ಲಿ ಪುರಾಣಗಳು ತೋರ್ಪಡಿಸಿರುವುವು. ನಮ್ಮ ಭರತಖಂಡದ ಮನುಷ್ಯರ ಶೀಲಘಟನೆಯಲ್ಲಿ ಪುರಾಣಗಳು ಬಹ್ವಂಶದಿಂದ ನೆರವಾಗುತ್ತ ಬಂದಿರುವುವು.

ಆದರೆ ಪುರಾಣಗಳು ಪುರಾಣ (ಹಳೆಯವು) ಗಳಾಗುತ್ತ ನಡೆದಂತೆ ಮಾನವನು ತನ್ನ ಮೊಂಡ ಸ್ವಭಾವವನ್ನನುಸರಿಸಿ ಪುರಾಣಗಳ ದೃಷ್ಟಾಂತಗಳೆಂದರೆ ಮನುಷ್ಯನ ಮನಸ್ಸನ್ನು ಬಹುದೂರಕ್ಕೆ ಎಳೆದೊಯ್ದು ಕೆಲಹೊತ್ತು ಬಾಹ್ಯಸೃಷ್ಟಿಯನ್ನು ಮರೆಯಿಸಿ ಸೊಗಸನ್ನುಂಟುಮಾಡುವ ತಾತ್ಕಾಲಿಕ ಉತ್ತೇಜಕ ವಿನೋದಸಾಮಗ್ರಿಗಳೆಂದೂ, ಪೌರಾಣಿಕವ್ಯಕ್ತಿಗಳು ಮಾನವ

ಕೋಟಿಗೆ ಮೀರಿದಂಥವುಗಳಾದುದರಿಂದ ತಾನು ಅವುಗಳನ್ನು ಅನುಕರಿಸಲಾರೆನೆಂದೂ ತಿಳಿಯಲಾರಂಭಿಸಿದನು. ಹೀಗಾಗಿ 'ಪುರಾಣದೊಳಗಿನ ಬದನೆಕಾಯಿ ಪುರಾಣದಲ್ಲಿ' ಎಂಬ ಮಾತಿನಂತೆ ಪುರಾಣದೊಳಗಿನ ಮಾತುಗಳ ಪರಿಣಾಮವನ್ನು ತನ್ನ ಮೇಲೆ ಮಾಡಿಕೊಳ್ಳದವನಾದನು. ಪುರಾಣಗಳು ಕೇವಲ ಮನುಷ್ಯನ ಭಕ್ತಿಪಾತ್ರವಾಗಿ ಉಳಿದುವು.

ಇತಿಹಾಸಗಳು ಕೆಲಮಟ್ಟಿಗೆ ಪುರಾಣಗಳ ಆ ಕೆಲಸವನ್ನು ಮಾಡತೊಡಗಿದುವು. ಐತಿಹಾಸಿಕ ವ್ಯಕ್ತಿಗಳಲ್ಲಿ ಕಂಡುಬರುವ ಸುಗುಣವಿಕಾಸವು ಅಶಕ್ಯಕೋಟಿಯೊಳಗಿನದೆಂದು ಹೇಳುವುದಕ್ಕೆ ಮನುಷ್ಯನು ಸಂಕೋಚಪಡುವನೆಂಬುದು ಸಹಜವೇ. ಆ ವ್ಯಕ್ತಿಗಳ ಅನುಕರಣದಿಂದ ಸುಶೀಲನಾಗುವ ಭಾರವು ತನ್ನ ಮೇಲೆ ಬಿದ್ದಿರುವುದೆಂದು ಆತನು ಒಪ್ಪಬೇಕಾಯಿತು. ಈ ಭಾರವನ್ನು ಸಹಜವಾಗಿ ಹಾರಿಸಿ ಒಗೆಯುವುದು ನಾಚಿಕೆಯ ಮಾತೆಂಬುದನ್ನು ಆತನು ಬಲ್ಲನು. ತನ್ನಂತೆ ಮಾನವರೆನಿಸಿಕೊಂಡ ಐತಿಹಾಸಿಕ ವ್ಯಕ್ತಿಗಳಲ್ಲಿ ಕಂಡು ಬಂದ ಗುಣವಿಕಾಸವು ತನಗೆ ಅಶಕ್ಯವೆಂಬ ಮಾತನ್ನು ಆತನು ಮುಂದೆ ಮಾಡಲಾರನು.

ಪುರಾಣೇತಿಹಾಸಗಳ ಮಹತ್ತ್ವವನ್ನೂ, ಮಾನವಸ್ವಭಾವದ ವೈಚಿತ್ರ್ಯಾಭಿರುಚಿಯನ್ನೂ ಅನುಲಕ್ಷಿಸಿ ಈ ಪುಸ್ತಕದಲ್ಲಿ ವಿದ್ಯಾರ್ಥಿಗಳ ಶೀಲಘಟನೆಗೆ ಸಹಾಯಕವಾದ ಕೆಲವು ಪೌರಾಣಿಕ ಐತಿಹಾಸಿಕ ಉದಾಹರಣೆಗಳೂ, ಅಂತಹ ಕೆಲವು ಕಲ್ಪಿತ ಉದಾಹರಣಗಳೂ ಸಣ್ಣಸಣ್ಣ ಕಥೆಗಳ ರೂಪದಲ್ಲಿ ಸಂಗ್ರಹಿಸಲ್ಪಟ್ಟಿರುವುವು. ಈ ಚಿಕ್ಕ ಪುಸ್ತಕವೇ ಶೀಲಘಟನೆಯಂಥ ಮಹತ್ವದ ಕೆಲಸಕ್ಕೆ ಸಾಕಾದುದೆಂದು ಪ್ರಕೃತ ಲೇಖಕನು ತಿಳಿದಿಲ್ಲವೆಂಬುದನ್ನು ಹೇಳಬೇಕಾಗಿಲ್ಲವಾದರೂ ಇಂತಹ ಪುಸ್ತಕಗಳಿಂದ ಆ ಕೆಲಸದಲ್ಲಿ ಸ್ವಲ್ಪ ಸಹಾಯವಾದೀತೆಂದು ಮಾತ್ರ ನಂಬಿರುವನು. ಪ್ರಕೃತ ಲೇಖಕನ ಸದ್ಗುಣಾದರ್ಶವೆಂಬ ಈ ತರದ ಇನ್ನೊಂದು ಪುಸ್ತಕವು ಆ ವಿಷಯದಲ್ಲಿ ಉಪಯುಕ್ತವಾಗಿರುವುದು.

ತರುಣ ವಿದ್ಯಾರ್ಥಿಗಳ ಕೈಯಲ್ಲಿ ಪ್ರೀತಿಪೂರ್ವಕವಾಗಿ ಕೊಟ್ಟ ಈ ಉಪಹಾರವನ್ನು ಅವರು ಆದರದಿಂದ ಸ್ವೀಕರಿಸಲಿ ಎಂದು ಹಾರೈಸುವ,

**ಧಾರವಾಡ.**
ತಾ॥ ೨೨-೮-೨೩.

**ದು. ಪ್ರ. ಪೂಜಾರ.**

ಪುನರ್ಮುದ್ರಣ. ೧೯೩೯.

# ಸತ್ಕಥಾಲಾಪ



ಪ್ರಾಚೀನಕಾಲದ ವಿದ್ಯಾರ್ಥಿ.

## ಉದ್ದಾಲಕ.

ಪೂರ್ವಕಾಲದಲ್ಲಿ ಋಷಿಗಳು ವಿದ್ಯಾರ್ಜನಕ್ಕಾಗಿ ಗುರುಕುಲಕ್ಕೆ ಬಂದ ವಿದ್ಯಾರ್ಥಿಗಳಿಗೆ ಗುರುಗಳ ಮಾತಿನಲ್ಲಿಯೂ, ಶಾಸ್ತ್ರಗಳಲ್ಲಿಯೂ ದೃಢವಿಶ್ವಾಸವು ಹುಟ್ಟಿರುವುದೋ ಇಲ್ಲವೋ ಎಂಬುದನ್ನೂ, ಶಾಸ್ತ್ರಗಳ ಗುಟ್ಟನ್ನರಿತುಕೊಳ್ಳುವ ಕುತೂಹಲವು ಅವರಲ್ಲಿ ಭರದಿಂದ ಉಂಟಾಗಿದೆಯೋ ಇಲ್ಲವೋ ಎಂಬುದನ್ನೂ ಪರೀಕ್ಷಿಸಿ, ಬಳಿಕ ಅವರವರ ಯೋಗ್ಯತಾನುಸಾರವಾಗಿ ವಿದ್ಯೆಯನ್ನು ಹೇಳಿಕೊಡುವರು. ತಪದ ಮಹಿಮೆಯಿಂದ ನಿರ್ಮಲವಾದ ಅಂತಃಕರಣವುಳ್ಳ ಋಷಿಗಳು, ಶಿಷ್ಯರು ಯೋಗ್ಯರಾದ ಬಳಿಕ ಅವರ ಮೇಲೆ ಪ್ರಸನ್ನರಾಗಿ ಅಲ್ಪಕಾಲದಲ್ಲಿಯೇ ಅವರನ್ನು ಸುಶಿಕ್ಷಿತರಾಗುವಂತೆ ಮಾಡುವರು.

ಹಿಂದಕ್ಕೆ ಆಯೋದಧೌಮ್ಯನೆಂಬ ಋಷಿಯ ಬಳಿಯಲ್ಲಿ ಪಾಂಚಾಲದೇಶದ ಆರುಣಿ ಎಂಬ ಶಿಷ್ಯನು ವಿದ್ಯಾಭ್ಯಾಸಕ್ಕಾಗಿ ಬಂದಿದ್ದನು. ಒಂದಾನೊಂದು ದಿವಸ ಮಳೆಯಾದ ಬಳಿಕ ಋಷಿಯು ಆರುಣಿಗೆ—ಮಗನೇ, ಬತ್ತದ ಹೊಲಕ್ಕೆ ಹೋಗಿ ಹೊಲದೊಳಗಿನ ನೀರು ಹರಿದುಹೋಗದಂತೆ ಒಡ್ಡು ಹಾಕಿ ಬಾ ಎಂದು ಹೇಳಿದನು. ಗುರುವಿನ ಅಪ್ಪಣೆಯನ್ನು ತಲೆಯಲ್ಲಾಂತು ಆರುಣಿಯು ಹೊಲಕ್ಕೆ ಹೋಗಿ ಒಡ್ಡು ಹಾಕುವುದಕ್ಕೆ ಇನ್ನಿಲ್ಲದಷ್ಟು ಕಷ್ಟಬಟ್ಟನು. ಒಂದು ಮೂಲೆಯಲ್ಲಿ ನೀರಿನ ಸೆಳೆವಿಗೆ ಒಡ್ಡು ನಿಲ್ಲಲಿಲ್ಲ. ಆಗ ಆರುಣಿಯು ಗುರುಗಳ ಆಜ್ಞೆಯನ್ನು ಪಾಲಿಸುವುದು ಅವಶ್ಯವೆಂದು ನೆನೆದು ಒಡ್ಡು ಒಡೆದಲ್ಲಿ ತಾನೇ ಅಡ್ಡ ಮಲಗಿ ನೀರನ್ನು ತಡೆದನು.

ಇತ್ತ ರಾತ್ರಿಯಾದರೂ ಆರುಣಿ ಆಶ್ರಮಕ್ಕೆ ಬಾರದಿರಲು ಋಷಿಯು ಉಳಿದ ಶಿಷ್ಯರೊಡನೆ ತಾನೇ ಹೊಲಕ್ಕೆ ಬಂದು ಅಲ್ಲಿ ಶಿಷ್ಯನನ್ನು ಕಾಣದೆ ಭಯಗೊಂಡು—ವತ್ಸಾ ಆರುಣೀ, ಬೇಗನೆ ನನ್ನ ಬಳಿಗೆ ಬಾ ಎಂದು ಗಟ್ಟಿಯಾಗಿ ಕೂಗತೊಡಗಿದನು. ಗುರುವಿನ ಪ್ರೀತಿಯ ದನಿಯನ್ನಾಲಿಸಿ ಆರುಣಿ ಮಲಗಿದಲ್ಲಿಂದ ಎದ್ದು ಆತನ ಬಳಿಗೆ ಬಂದು ವಂದನೆಮಾಡಿ—ಸ್ವಾಮೀ,

ಹೊಲದಿಂದ ನೀರು ಹರಿದು ಹೋಗುವದನ್ನು ಒಡ್ಡು ಹಾಕಿ ನಿಲ್ಲಿಸುವುದಾಗ ದಿರಲು ನನ್ನ ಈ ದೇಹವನ್ನೇ ಅಡ್ಡಹಾಕಿದ್ದೆನು. ಈಗಲೂ ನೀರು ಹರಿದು ಹೋಗುತ್ತಿದೆ, ಹೇಗೆ ಮಾಡಲಿ? ಎಂದು ಕೇಳಿದನು. ಆರುಣಿಯ ಈ ಸೇವೆಗೆ ಋಷಿ ಮೆಚ್ಚಿ ಸಂತೋಷದಿಂದ—ವತ್ಸಾ, ನೀನು ಈಗ ಹೊಲದ ಒಡ್ಡನ್ನು ಉದ್ದಲನಮಾಡಿ (ಒಡೆದು) ಎದ್ದು ಬಂದುದರಿಂದ ನಿನ್ನನ್ನು ಈ ಹೊತ್ತಿನಿಂದ ಉದ್ದಾಲಕನೆಂದು ಕರೆಯುವೆನು; ನಿನಗೆ ಕಲ್ಯಾಣವಾಗಲಿ, ವೇದವೇದಾಂಗ ಮೊದಲಾದ ವಿದ್ಯೆಗಳು ತಾವಾಗಿ ನಿನಗೆ ಹೊಳೆಯಲಿ. ಎಂದು ಹರಸಿದನು.

ಗುರುವಿನ ಅನುಗ್ರಹದಿಂದ ಉದ್ದಾಲಕನು ಮುಂದೆ ದೊಡ್ಡ ಋಷಿ ಯಾಗಿ ಮಹಾ ತಪಸ್ವಿಯೆಂದು ಹೆಸರಾದನು.

---

ಸ್ವದೇಶಪ್ರೀತಿ

## ೨. ಜಪಾನಿ ಕೂಲಿಕಾರನ ತಾಯಿ.

ರೂಸೋಜಪಾನಿ ಯುದ್ಧವು ನಡೆದ ಕಾಲದಲ್ಲಿ ಜಪಾನದ ದಂಡು ಗುಂಪು ಗುಂಪಾಗಿ ಕೋರಿಯಕ್ಕೆ ಸಾಗುತ್ತಿರಲು ಒಬ್ಬ ಜಪಾನಿ ಕೂಲಿಕಾರನು ಆ ದಂಡಿನೊಳಗೆ ತನ್ನನ್ನೂ ಸೇರಿಸಿಕೊಳ್ಳಬೇಕೆಂದು ದಳವಾಯಿಗೆ ಅರಿಕೆಮಾಡಿ ಕೊಂಡನು. ಜಪಾನದಲ್ಲಿ ಮುದುಕ ತಂದೆತಾಯಿಗಳನ್ನು ಸಲಹುವುದಕ್ಕೆ ಒಬ್ಬನೇ ಮಗನಿದ್ದು ಅವರು ಬಡವರಾಗಿದ್ದರೆ, ದಂಡಾಳುಗಳ ಕೊರತೆಯಿಲ್ಲ ದಾಗ ಆ ಮಗನನ್ನು ದಂಡಿನಲ್ಲಿ ಸೇರಿಸಿಕೊಳ್ಳಕೂಡದೆಂದು ನಿಯಮವುಂಟು. ದಂಡಿನ ಭರತಿ ಮಾಡುವ ಅಧಿಕಾರಿಯು ಈ ಕೂಲಿಕಾರನ ವಿಷಯವಾಗಿ ವಿಚಾರಮಾಡುತ್ತಿರಲು—ಈತನು ಹೊಲಮನೆ ಮೊದಲಾದ ಯಾವ ಆಸ್ತಿಯೂ ಇಲ್ಲದ ತೀರ ಬಡವನೆಂದೂ, ಈತನಿಗೆ ತೀರ ಮುದುಕಿಯಾದ ತಾಯಿಯೊ ಬ್ಬಳು ಇರುವಳೆಂದೂ, ಆಕೆ ದುಡಿದು ಹೊಟ್ಟೆಹೊರೆದುಕೊಳ್ಳಲಾರಳೆಂದೂ ತಿಳಿಯಬಂದಿತು. ಆಗ ಅಧಿಕಾರಿಯು ಆತನನ್ನು ಕಾಯದೆಯ ಮೇರೆಗೆ 'ರೆಜಿಮೆಂಟಿ' ನಲ್ಲಿ ಸೇರಿಸಿಕೊಳ್ಳದೆ ಹಿಂದಕ್ಕೆ ಕಳುಹಿದನು. ತಾಯಿ ಮಗನ ವೀರಶ್ರೀಯನ್ನು ನೋಡಿ ಕಾಳಗಕ್ಕೆ ಕಳುಹಿದ್ದಳು. ಮತ್ತು ಕಳುಹು ವಾಗ—ಮಗನೇ, ಪವಿತ್ರವಾದ ರಣಕ್ಷೇತ್ರದಲ್ಲಿ ದೇಶಕ್ಕೋಸ್ಕರ ನೀನು ದೇಹ ವನ್ನರ್ಪಿಸಿದರೂ ಚಿಂತೆಯಿಲ್ಲ; ಅನ್ನವಿಲ್ಲದೆ ನಾನು ಸಾಯಬಹುದು; ಇದನ್ನು ನೀನು ಯೋಚಿಸಬೇಡ ಎಂದು ಹೇಳಿದ್ದಳು. ಈಗ ಮಗನು ಮೋರೆಯೊಣಗಿಸಿ

ಕೊಂಡು ಮನೆಗೆ ಬಂದನು. ಮುಂದುಕೆ ನಡೆದ ಸಮಾಚಾರವನ್ನೆಲ್ಲ ಕೇಳಿ ಈ ಬಂದು ಹಾಳು ಜೀವಕ್ಕೋಸ್ಕರ ನೀನು ದೇಶದ ಮತ್ತು ಚಕ್ರವರ್ತಿಯ ಕಾರ್ಯದಲ್ಲಿ ಪ್ರಾಣದಾನ ಮಾಡಬಹುದಾದ ಸಮಯವನ್ನು ಕಳೆದುಕೊಳ್ಳ ಬೇಕಾಯಿತೇ? ಇದೇನೂ ಸರಿಯಲ್ಲ; ನಾನು ನಿನ್ನ ಕರ್ತವ್ಯಕ್ಕೂ, ಕೀರ್ತಿಗೂ ಅಡ್ಡಬಂದು ಬದುಕಿದಲ್ಲಿ ಫಲವೇನು? ನೀನು ನಿನ್ನ ಕರ್ತವ್ಯಕ್ಕಾಗಿ—ಪವಿತ್ರ ವಾದ ಯುದ್ಧಕ್ಕಾಗಿ—ಈಗಲೇ ಮತ್ತೆ ತೆರಳು. ನನ್ನ ಪ್ರೇಮದ ಆಶೀರ್ವಾ ದವು ನಿನ್ನನ್ನು ಸಲಹಲಿ ಎಂದು ನುಡಿದು ಆಕೆ ಹೊಟ್ಟೆಯನ್ನಿರಿದುಕೊಂಡು ಪ್ರಾಣಬಿಟ್ಟಳು. ಮಗನೂ ತಾಯಿಯ ಉತ್ತರಕ್ರಿಯೆಯನ್ನು ಮುಗಿಸಿ ಕೂಡಲೆ ಯುದ್ಧಕ್ಕೆ ನಡೆದನು.

ಯಾವ ದೇಶದಲ್ಲಿ ಕೂಲಿಕಾರರು ಕೂಡ ದೇಶದ ಮೇಲೆ ಇಷ್ಟೊಂದು ಪ್ರೀತಿಯುಳ್ಳವರೋ ಆ ದೇಶವು ಧನ್ಯವಾದುದು!

---

ಗುರುಭಕ್ತಿ.

## ೩. ಬಂಡಿಯ ಹೊಡೆಯುವ ಒಬ್ಬ ಶೀಖನ ಆತ್ಮಸಮರ್ಪಣ.

ಔರಂಗಜೇಬ ಬಾದಶಹನು ದಿಲ್ಲಿಯ ರಾಜಮಾರ್ಗದ ಚೌಕಿನಲ್ಲಿ ಶೀಖರ ಗುರುವಾದ ತೇಗಬಹದೂರನ ತಲೆಹೊಡೆಯಿಸಿ ಹೆಣವನ್ನು ಸಂಸ್ಕಾರದ ಸಲುವಾಗಿ ಯಾರಿಗೂ ಕೊಡಕೂಡದೆಂದೂ, ಅದು ಬಿದ್ದಲ್ಲಿಯೇ ಕೊಳೆತು ಹೋಗಬೇಕೆಂದೂ ಕಟ್ಟಪ್ಪಣೆ ಮಾಡಿದ್ದನು. ಗುರುಗೋವಿಂದಸಿಂಗನು ಆಗ ಹದಿನಾರು ವರ್ಷದ ಹುಡುಗನು. ಹೇಗಾದರೂ ಮಾಡಿ ಪಿತೃದೇಹಕ್ಕೆ ಸಂಸ್ಕಾರ ಮಾಡಬೇಕೆಂದು ಪಂಜಾಬದಿಂದ ದಿಲ್ಲಿಗೆ ಹೊರಟಿದ್ದನು. ದಾರಿ ಯಲ್ಲಿ ಬಂಡಿಯ ಹೊಡೆಯುವ ಒಬ್ಬ ಶೀಖನೂ ಆತನ ಮಗನೂ ಗೋವಿಂದ ಸಿಂಗನನ್ನು ಕಂಡರು; ಮತ್ತು ಗುರುವಿನ ದೇಹವನ್ನು ತಂದುಕೊಡುವ ಭಾರವು ತಮ್ಮನ್ನು ಕೂಡಿತೆಂದು ಹೇಳಿದರು. ಅವರ ಬಲುಮೆಯನ್ನು ಕಂಡು ಗೋವಿಂದಸಿಂಗನು ಅದಕ್ಕೆ ಒಪ್ಪಿದನು. ಆ ತಂದೆಮಕ್ಕಳ ವಿಚಾರವೇನೆಂದರೆ- ತಮ್ಮ ಸಮಾಜಕ್ಕೆಲ್ಲ ಒಡೆಯನೆನಿಸಿದ ಗೋವಿಂದಸಿಂಗನನ್ನು ಈ ವಿಪತ್ತಿನ ಕೆಲಸಕ್ಕೆ ಹೋಗಗೊಡುವುದು ಸರಿಯಲ್ಲ; ಗುರುಪುತ್ರನಿಗೆ ಕೇಡು ಒದಗಿದರೆ ಸಮಾಜದ ಘಾತವಾದೀತು. ಅವರು ಗೋವಿಂದಸಿಂಗನಿಗೆ ಊರ ಹೊರಗೆ ಇರಹೇಳಿ ತಾವಿಬ್ಬರೇ ಮಧ್ಯರಾತ್ರಿಯಲ್ಲಿ ಪಟ್ಟಣದೊಳಗೆ ನಡೆದರು.

ರಾಯಬೀದಿಯಲ್ಲಿ ಬಂದು ನೋಡುತ್ತಾರೆ—ಪಹರೆಯವರು ಹೆಣದ ಸಾತಕ್ಕೆ ಹೇಸಿ ದೂರ ಹೋಗಿ ಮಲಗಿದ್ದಾರೆ; ಜನರೆಲ್ಲರೂ ನಿದ್ರಾವಶರು; ಕಗ್ಗತ್ತಲೆ ಕವಿದಿದೆ. ಅರಿವೆ ಮುಚ್ಚಿದ ಹೆಣವು ದಾರಿಯ ಬದಿಗೆ ಬಿದ್ದಿದೆ. ತಂದೆಮಕ್ಕಳಿಬ್ಬರೂ ಸದ್ದುಮಾಡದೆ ಗುರುವಿನ ದೇಹದ ಬಳಿಗೆ ಹೋದರು. ಅದನ್ನು ಹೊತ್ತೊಯ್ಯಬೇಕೆನ್ನುವಷ್ಟರಲ್ಲಿ ಅವರು ತಮ್ಮಿಬ್ಬರಲ್ಲೊಬ್ಬರು ಅಲ್ಲಿ ಸತ್ತು ಬೀಳುವುದು ಅವಶ್ಯವೆಂದೆಣಿಸಿದರು. ಏಕೆಂದರೆ, ಪಹರೆಯವರು ಎಚ್ಚತ್ತ ಬಳಿಕ ಅಲ್ಲಿ ಹೆಣವಿಲ್ಲದಿರಲು ಕೂಡಲೆ ಬಾದಶಹನ ಶಾಸನದ ಅಂಜಿಕೆಯಿಂದ ಸುತ್ತಲು ಹುಡುಕುತ್ತ ಬರುವರು. ಆಗ ಹೆಣವನ್ನು ಹೊತ್ತುಕೊಂಡು ಹೋಗುವ ನಾವು ತಪ್ಪದೆ ಅವರ ಕೈಗೆ ಸಿಕ್ಕುವೆವು.

ಆಗ ಮಗನು—ನಾನು ಸತ್ತು ಬೀಳುತ್ತೇನೆಂದನು. ಆದರೆ, ತಂದೆ—ಮಗನೇ, ನೀನು ನನಗಿಂತ ಗಟ್ಟಿಗನು, ಗುರುವಿನ ದೇಹವನ್ನು ಸಹಜವಾಗಿ ಹೊತ್ತೊಯ್ಯಬಲ್ಲೆ; ಮತ್ತು ಮುಂದೆ ಹೊಸಗುರುವಿನ ಆಶ್ರಯದಲ್ಲಿ ಧರ್ಮಕ್ಕೋಸ್ಕರ ಯುದ್ಧಮಾಡಬೇಕಾದಾಗ ನನಗಿಂತ ಹೆಚ್ಚು ದಿವಸ ತಾಳಬಲ್ಲೆ; ಆದುದರಿಂದ ನೀನು ಬದುಕುವುದೇ ಒಳ್ಳೆಯದು; ಎಂದು ಹೇಳಿ ಆತನು ಸದ್ದಿಲ್ಲದೆ ಎದೆಗೆ ಕಿರುಗತ್ತಿಯನ್ನಿರಿದುಕೊಂಡು ಸತ್ತುಬಿದ್ದನು. ಮಗನು ರಕ್ತಮಯವಾದ ತಂದೆಯ ಶರೀರವನ್ನು ಅರಿವೆಯಿಂದ ಮುಚ್ಚಿ ಮೊದಲಿನಂತೆ ಇಟ್ಟು ಗುರುವಿನ ದೇಹವನ್ನು ಹೊತ್ತುಕೊಂಡು ಹೋದನು.

ನಿಜವಾದ ಮಹಾಪುರುಷರು ಲೋಕನಾಯಕರಾಗಿರುವಾಗ ಮಾನಜದ ಏಳಿಗೆಯ ಕಾಲವು ಒದಗಿ ಬರುವುದು. ಆಗ ಇಡಿ ಸಮಾಜವೇ ಜಾಗ್ರತವಾಗುವುದು. ಆ ಸಮಾಜದಲ್ಲಿ ಬಂಡಿಯ ಹೊಡೆಯುವವನೂ ಆತ್ಮಸಮರ್ಪಣ ಮಾಡಬಲ್ಲನು!

---

ವಚನಪಾಲನ.

## ೪. ದಧೀಚಿ ಋಷಿ.

ಪೂರ್ವಕಾಲದಲ್ಲಿ ದಧೀಚಿ ಎಂಬ ಒಬ್ಬ ಮಹಾತಪಸ್ವಿಯಿದ್ದನು. ಆತನ ಹೆಂಡತಿ ಗಭಸ್ತಿನಿ. ದಾನವರು ಈ ಮಹರ್ಷಿಯ ಆಶ್ರಮದ ನೆರೆಹೊರೆಯಲ್ಲಿ ಸುಳಿದಾಡುವುದಕ್ಕೂ ಅಂಜುತ್ತಿದ್ದರು. ಒಂದಾನೊಂದು ದಿವಸ ಇಂದ್ರಾದಿದೇವತೆಗಳು ಈ ಋಷಿಯ ಗುಡಿಸಲಿಗೆ ಬಂದು:—ಮಹಾಸ್ವಾಮಿ,

ತಮ್ಮ ದರ್ಶನದಿಂದ ಧನ್ಯರಾದೆವು; ಈಗ ನಾವು ತಮ್ಮ ಸನ್ನಿಧಾನಕ್ಕೆ ಬಂದಿರುವುದಕ್ಕೆ ಒಂದು ನಿಮಿತ್ತವುಂಟು. ಅದೇನೆಂದರೆ, ಈಗ ನಾವು ದಾನವರನ್ನೆಲ್ಲ ಸೋಲಿಸಿ ಬಗ್ಗುಬಡಿದು ಬಳಲಿ ಬಂದಿರುವೆವು; ನಂದನವನವಿಹಾರಕ್ಕೆ ಹೋಗಲೆಳಸಿರುವೆವು; ಆದರೆ ನಮ್ಮ ಶಸ್ತ್ರಾಸ್ತ್ರಗಳನ್ನಿರಿಸುವದಕ್ಕೆ ಒಂದು ನಿರ್ಭಯಸ್ಥಾನವು ಬೇಕಾಗಿದೆ. ಸ್ವರ್ಗದಲ್ಲಿರಿಸಿದರೆ ಅಪಜಯದಿಂದ ನೊಂದುಕೊಂಡ ದಾನವರು ಅವುಗಳನ್ನು ಏನಾದರೂ ಮಾಡಿ ಅಪಹರಿಸಬಹುದು; ತಮ್ಮ ತಪಃಪ್ರಭಾವದಿಂದ ಈ ಆಶ್ರಮದಲ್ಲಿ ದಾನವರ ಉಪಟಳವು ಆಗದೆಂದು ನಂಬಿರುವೆವು. ಆದುದರಿಂದ ಇವುಗಳನ್ನೆಲ್ಲ ನಾವು ಮರಳಿ ಒಯ್ಯುವ ವರೆಗೆ ಇರಿಸಿಕೊಂಡು ನಮಗೆ ನಂದನವನವಿಹಾರದ ಅನುಕೂಲತೆಯನ್ನು ಮಾಡಿಕೊಡಬೇಕು; ಎಂದು ಬೇಡಿಕೊಂಡರು. ಋಷಿಯು ದೇವತೆಗಳ ಪ್ರಾರ್ಥನೆಯನ್ನು ಒಪ್ಪಿಕೊಂಡನು.

ಆಗ ಗಭಸ್ತಿನಿ ಪತಿಗೆ—ಸ್ವಾಮೀ, ಸರ್ವಸಂಗಪರಿತ್ಯಾಗಮಾಡಿ ತಪಶ್ಚರಣೆಮಾಡುತ್ತಿರುವ ನಮಗೆ ಈ ಶಸ್ತ್ರಾಸ್ತ್ರಗಳ ತೊಡಕು ಏಕೆ? ದಾನವರಿಗೆ ಈ ಸುದ್ದಿ ತಿಳಿದರೆ ನಿಮಗೆ ಬಹಳ ಕಷ್ಟವಾದೀತು ಎಂದು ಹೇಳಿದಳು.

ಆಗ ದಧೀಚಿಯು ಹೆಂಡತಿಗೆ—ನೀನು ಹೇಳುವುದು ಸರಿ. ಆದರೆ ವಚನವನ್ನು ಕೊಟ್ಟುಬಿಟ್ಟಿರುವೆನು; ಕೊಟ್ಟ ವಚನವನ್ನು ಎಂದೂ ತಿರುಗಿಸಲಾರೆನು ಎಂದು ಹೇಳಿದನು. ಆಗ ದೇವತೆಗಳು ಶಸ್ತ್ರಾಸ್ತ್ರಗಳನ್ನು ಅಲ್ಲಿ ಇಟ್ಟು ನಂದನವನಕ್ಕೆ ತೆರಳಿದರು.

ಇತ್ತ ಈ ಸುದ್ದಿಯನ್ನು ಕೇಳಿ ದಾನವರು ದಧೀಚಿಋಷಿಯನ್ನು ಬಗೆಬಗೆಯಿಂದ ಕಾಡತೊಡಗಿದರು. ತನ್ನ ಆಶ್ರಮವನ್ನೂ ದೇವತೆಗಳ ಶಸ್ತ್ರಾಸ್ತ್ರಗಳನ್ನೂ ಕಾಯುವುದರಲ್ಲಿ ಋಷಿ ಬೇಸತ್ತುಹೋದನು. ಕೊನೆಗೆ ಪುಣ್ಯಜಲದಿಂದ ಆ ಶಸ್ತ್ರಾಸ್ತ್ರಗಳನ್ನು ಪ್ರೋಕ್ಷಿಸಿ ಅವನ್ನು ಜಲರೂಪವಾಗಿ ಮಾಡಿ ಕುಡಿದುಬಿಟ್ಟನು.

ಕೆಲವು ಕಾಲದ ತರುವಾಯ ದಾನವರ ಪೀಡೆ ಮತ್ತೆ ಹೆಚ್ಚಲು ದೇವತೆಗಳು ದಧೀಚಿಋಷಿಯ ಬಳಿಗೆ ಬಂದು—ಸ್ವಾಮೀ, ದಾನವರ ಪೀಡೆ ಅಸಹ್ಯವಾಗಿದೆ; ನಮ್ಮ ಶಸ್ತ್ರಾಸ್ತ್ರಗಳನ್ನು ನಮಗೆ ಕೊಡಿರಿ ಎಂದು ಕೇಳಿದರು. ಆಗ ದಧೀಚಿಋಷಿಯು ಆಶ್ರಮದಲ್ಲಿ ದಾನವರ ಉಪಟಳವು ಹೆಚ್ಚಿದುದನ್ನೂ,

ಶಸ್ತ್ರಾಸ್ತ್ರಗಳಿಗೆ ಜಲರೂಪಕೊಟ್ಟು ತಾನು ಕುಡಿದುದನ್ನೂ ಅವು ಅಸ್ಥಿರೂಪ ಹೊಂದಿರುವುದನ್ನೂ ದೇವತೆಗಳಿಗೆ ಹೇಳಿದನು. ಈ ಮಾತಿನಲ್ಲಿ ನಂಬುಗೆ ದೋರದಿರಲು ದೇವತೆಗಳು—ಸ್ವಾಮಿ, ವಿನೋದದ ಮಾತುಗಳಿಗೆ ಇದು ಸಮಯವಲ್ಲ; ಶಸ್ತ್ರಾಸ್ತ್ರಗಳಿಲ್ಲದೆ ನಾವು ಬದುಕಲಾರೆವು; ದಯಮಾಡಿ ಅವುಗಳನ್ನು ಕೊಟ್ಟುಬಿಡಿರಿ ಎಂದು ನುಡಿದರು. ಆಗ ಋಷಿಯು—ಪೂಜ್ಯ ರಾದ ದೇವತೆಗಳೇ, ನಿಮಗಿಂತ ನನ್ನ ದೇಹವು ಹೆಚ್ಚಿನದಲ್ಲ; ನಾನು ಈಗಲೇ ಯೋಗಾರೂಢನಾಗಿ ದೇಹತ್ಯಾಗ ಮಾಡುವೆನು. ನನ್ನ ಅಸ್ಥಿಗಳೇ ನಿಮಗೆ ಅಸ್ತ್ರಗಳಾಗುವುವು; ಎನಲು ದೇವತೆಗಳು ಮುಂದುಗಾಣದೆ ಒಪ್ಪಿದರು. ಆಗ ಋಷಿ ತನ್ನ ಹೆಂಡತಿ ನೀರಿಗಾಗಿ ಹೊರಗೆ ಹೋದ ಹೊತ್ತಿನಲ್ಲಿ ಪದ್ಮಾ ಸನವನ್ನು ಹಾಕಿ ದೇಹತ್ಯಾಗಮಾಡಿದನು. ದೇವತೆಗಳು ಆತನ ಎಲುವು ಗಳಿಂದ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಂಡರು.

ಗಭಸ್ತಿನಿ ಗುಡಿಸಲಿಗೆ ಬಂದು ನೋಡುತ್ತಾಳೆ–ಪತಿಯಿಲ್ಲ. ಅಗ್ನಿಯು ನಡೆದ ಸಮಾಚಾರವನ್ನೆಲ್ಲ ಹೇಳಿದನು. ಕೂಡಲೆ ಆಕೆ ಬಹಳ ಶೋಕಮಾಡಿ ದಳು. ಬಳಿಕ ಪತಿದೇಹದ ಅವಶೇಷಗಳಾದ ರೋಮನಖಗಳನ್ನು ಒಟ್ಟು ಗೂಡಿಸಿ ಅವುಗಳನ್ನಿಟ್ಟು ಒಂದು ಚಿತೆಯನ್ನು ಏರ್ಪಡಿಸಿ ಅದರಲ್ಲಿ ದುಮು ಕಿದಳು.

ಮಹಾತ್ಮರು ಕಂಡಕಂಡಂತೆ ವಚನಕೊಡುವುದಿಲ್ಲ; ಕೊಟ್ಟ ಬಳಿಕ ತಿರುಗಿಸುವುದಿಲ್ಲ.

---

ಸಾಧುತ್ವ

## ೫. ಹಾತೆಮ್.

ಏಮನ್ ದೇಶದ ಅರಸನು ದಾನಶೂರನೆಂದು ಪ್ರಸಿದ್ಧನಾಗಿದ್ದನು. ಒಂದಾನೊಂದು ದಿವಸ ದರಬಾರದವನೊಬ್ಬನು ಸದ್ಗುಣಿಯಾದ ಹಾತೆಮನ ಕೀರ್ತಿಯನ್ನು ಬಣ್ಣಿಸಲು ಅರಸನಿಗೆ ಹಾತೆಮನ ವಿಷಯವಾಗಿ ಹೊಟ್ಟೆಕಿಚ್ಚು ಹುಟ್ಟಿತು. ಅರಸನು ತನ್ನ ಕೀರ್ತಿಗೆ ಅಡ್ಡಬರುವವರು ಯಾರೂ ಇರಬಾರ ದೆಂದು ಬಗೆದು, ಏಕಾಂತದಲ್ಲಿ ಒಬ್ಬ ಸೇವಕನನ್ನು ಕರೆಕಳುಹಿ ಹಾತೆಮನ ತಲೆಯನ್ನು ತೆಗೆದುಕೊಂಡುಬಾ ಎಂದು ಅಪ್ಪಣೆಮಾಡಿದನು. ಸೇವಕನು ಹಾತೆಮನ ಊರಿಗೆ ಸಾಯಂಕಾಲಕ್ಕೆ ಬಂದನು. ಅಗಸೆಯ ಬಾಗಿಲಲ್ಲಿ ಒಬ್ಬ

ಸೌಮ್ಯನಾದ ತರುಣನು ತಾನಾಗಿ ಬಳಿಗೆ ಬಂದು ತಕ್ಕ ಮನ್ನಣೆಮಾಡಿ ಈತನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಬಹಳ ಆದರದಿಂದ ಸತ್ಕಾರ ಮಾಡಿದನು. ರಾತ್ರಿಯಲ್ಲಿ ಇಬ್ಬರೂ ಒಂದೇ ಕೋಣೆಯಲ್ಲಿ ಮಲಗಿದರು. ಆಗ ತರುಣನು ಅತಿಥಿಗೆ–ಇನ್ನೆರಡು ದಿವಸ ತನ್ನ ಮನೆಯಲ್ಲಿದ್ದು ಹೋಗಬೇಕೆಂದು ಬೇಡಿಕೊಳ್ಳಲು ಅತಿಥಿಯು–ನನ್ನ ಮೇಲೆ ದೊಡ್ಡದೊಂದು ಗುಪ್ತಕಾರ್ಯದ ಹೊರೆಯುಂಟು. ಬೆಳಗಾಗುತ್ತಲೆ ಹೋಗಬೇಕಾಗಿದೆ, ನಿಲ್ಲುವಂತಿಲ್ಲ ಎಂದು ಹೇಳಿದನು. ಆಗ ತರುಣನು ನಿನ್ನ ಕಾರ್ಯಕ್ಕೆ ಸಂಪೂರ್ಣ ಸಹಾಯಮಾಡುತ್ತೇನೆಂದು ತಾನಾಗಿ ಒಪ್ಪಿಕೊಳ್ಳಲು ಆ ಸೇವಕನು ತಾನು ಹಾತೆಮನ ತಲೆಯನ್ನು ಕಡಿದೊಯ್ಯುವುದಕ್ಕೆ ಬಂದಿರುವೆನೆಂದೂ ಈ ಕೆಲಸದಲ್ಲಿ ಸಹಾಯಕನಾದರೆ ನಿನಗೆ ಬಹಳ ಹಣವನ್ನು ಮೆಚ್ಚುಕೊಡುವೆನೆಂದೂ ಹೇಳಿದನು. ಆಗಲಾತರುಣನು-ನಾನೇ ಹಾತೆಮನು, ತಾವು ಬೇಗನೆ ನನ್ನ ತಲೆಯನ್ನು ಕಡಿದೊಯ್ಯಿರಿ, ಈ ಒಳಬಾಗಿಲಿನಿಂದ ಹೊರಹೊರಟು ಈಗಲೇ ಹೋಗಿಬಿಟ್ಟರೆ ನನ್ನ ಸಂಗಡಿಗರಿಗಾಗಲಿ, ಊರವರಿಗಾಗಲಿ ಏನೂ ತಿಳಿಯುವುದಿಲ್ಲ. ತಾನು ಈ ಕೋಣೆಯಲ್ಲಿ ಮಲಗಿರುವನೆಂದೇ ತಿಳಿಯುವರು. ಬೆಳಗಾಗುವಷ್ಟರಲ್ಲಿ ನೀವು ಬಹುದೂರ ಹೋಗಿಬಿಡಬಹುದು; ಮತ್ತು ಯಾವ ವಿಪತ್ತೂ ಬಾರದಂತೆ ಕೆಲಸವನ್ನು ಜರುಗಿಸಿದಂತಾಗುವುದು; ಬೆಳಗಾದ ಬಳಿಕ ಈ ಕೆಲಸವನ್ನು ಮಾಡಿದರೆ ಮರಳಿ ಹೋಗುವುದಕ್ಕೆ ಬಹಳ ತೊಂದರೆಯಾದೀತು, ಎಂದು ಹೇಳಿದನು. ಈ ಸ್ವರ್ಗೀಯ ಮಹತ್ತ್ವವನ್ನು ನೋಡಿ ಬೆರಗಾದ ಆ ರಾಜಸೇವಕನು ಹಾತೆಮನ ಸಾಧುತನಕ್ಕೆ ಮರುಳಾಗಿ ಆತನ ಪಾದಕ್ಕೆರಗಿ ಮತ್ತೆ ಮತ್ತೆ ಆತನ ಕ್ಷಮೆಯನ್ನು ಬೇಡಿಕೊಂಡನು.

---

ಜಾತಿಭೇದವು ಊಟದ ಮನೆಯಲ್ಲಿ.

## ೬. ಹೊಲೆಯ ಸಿದ್ನಾಕನು.

ಸಾತಾರೆ ಜಿಲ್ಲೆಯ ಕಳಂಬ ಎಂಬ ಊರಲ್ಲಿ ಹೊಲೆಯ ಜಾತಿಯ **ಸಿದ್ನಾಕ** ಎಂಬ ಸರದಾರನು ಆಗಿ ಹೋದನು. ಶಾಹುಮಹಾರಾಜನು ಮೊಗಲರ ಸೆರೆಯಿಂದ ಬಿಡುಗಡೆ ಹೊಂದಿ ಬರುತ್ತಿರುವಾಗ ಆತನಿಗೆ ಸಹಾಯ ಮಾಡಿ ಉಂಬಳಿಯನ್ನು ಹೊಂದಿದ ಹಲವರು ಸರದಾರರಲ್ಲಿ ಈತನ ಅಜ್ಜನೊ

ಬ್ಬನು. ಕ್ರಿ. ಶ. ೧೭೯೫ರ ಸುಮಾರಿಗೆ ಮರಾಠರಿಗೂ ನಿಜಾಮನಿಗೂ ಖರ್ಡೆ ಎಂಬಲ್ಲಿ ದೊಡ್ಡ ಕಾಳಗವಾಯಿತು. ಅದರಲ್ಲಿ ನಿಜಾಮನು ಪೂರ್ಣವಾಗಿ ಸೋತನು. ಆ ಯುದ್ಧಕ್ಕೆ ಪೇಶವೆ ಸವಾಯಿಮಾಧವರಾಯನೊಡನೆ ಎಲ್ಲ ಮಹಾರಾಷ್ಟ್ರ ಸರದಾರರೂ ಹೋಗಿದ್ದರು. ಖರ್ಡೆಯ ಬಯಲಲ್ಲಿ ಎಲ್ಲ ಸರದಾರರೂ ತಮ್ಮ ತಮ್ಮ ಬೀಡುಬಿಟ್ಟಿದ್ದರು. ಸಿದ್ಧನಾಕನ ರಾಹುಟಿಯ ಆಚೆಗೂ ಈಚೆಗೂ ಎಷ್ಟೋಜನ ಮರಾಠ, ಬ್ರಾಹ್ಮಣ ಸರದಾರರ ರಾಹುಟಿಗಳಿದ್ದುವು. ಆಗ ಅವರಲ್ಲಿ ಕೆಲವರು ಪೇಶವೆಯು ಓಲಗದಲ್ಲಿದ್ದಾಗ ಆತನ ಬಳಿಗೆ ಹೋಗಿ—ಹೊಲೆಯರವನ ರಾಹುಟಿಯು ನಮ್ಮೆಲ್ಲರ ನಡುವೆ ಇರುವುದು ಸರಿಯಲ್ಲ; ಕೊನೆಯಲ್ಲಿ ಆತನ ರಾಹುಟಿಯನ್ನು ಹಾಕಿಸಬೇಕು ಎಂದು ಕೇಳಿಕೊಂಡರು. ಪೇಶವೆಯು ತಾನು ಉತ್ತರ ಹೇಳದೆ ಪಾಟಣಕರ ಹಿರೋಜಿ ಎಂಬ ವಯೋವೃದ್ಧ ಸರದಾರನಕಡೆಗೆ ನೋಡಿದನು. ಆತನು ಬಂದ ಸರದಾರರನ್ನು ಕುರಿತು—ಎಲೈ ವೀರರೇ, ಇದೇನೂ ಊಟದ ಮನೆಯಲ್ಲ; ರಣರಂಗವು; ಇಲ್ಲಿ ಜಾತಿತಾರತಮ್ಯವಿಲ್ಲ. ಯಾವನ ಖಡ್ಗವು ಉಚ್ಚತರದ್ದೋ ಆತನೇ ಇಲ್ಲಿ ಉಚ್ಚತರದವನು; ಆದುದರಿಂದ ಇಲ್ಲಿ ಈ ವಿಚಾರವು ಬೇಡ ಎಂದು ಹೇಳಿದನು. ಪೇಶವೆಯು ತಲೆದೂಗಿದನು.

ಮುಂದೆ ಯುದ್ಧವು ಆರಂಭವಾಗಲು ಎಲ್ಲ ಸರದಾರರು ಪೇಶವೆಗೆ "ಮುಜುರೆ" ಮಾಡಿ ರಣಾಂಗಣಕ್ಕೆ ನಡೆದಿರಲು ಸಿದ್ಧನಾಕನು ಬಂದು ಪೇಶವೆಗೆ—ಒಡೆಯಾ, ನಾನು ಹೊಲೆಯನೆಂದು ಹಲವರು ನನ್ನನ್ನು ಹೀಯಾಳಿಸುವರು; ಆದರೆ ಈ ದಿವಸದ ನನ್ನ ಪರಾಕ್ರಮವನ್ನು ದೇವರು ನೋಡಬೇಕು ಎಂದು ಹೇಳಿ ನಡೆದನು. ಯುದ್ಧದಲ್ಲಿ ಪರಶುರಾಮಭಾವು ಪಟವರ್ಧನ ಎಂಬ ದೊಡ್ಡ ಸರದಾರನ ಮೇಲೆ ನಿಜಾಮನ ಕಡೆಯ ಅಫಗಾಣ ದಂಡಾಳುಗಳು ಮುಗಿಬಿದ್ದು ಆತನನ್ನು ಕುದುರೆಯ ಮೇಲಿಂದ ಕೆಳಗೆ ಎಳೆದರು. ಇಷ್ಟರಲ್ಲಿ ಸಿದ್ಧನಾಕನು ಆ ಅಫಗಾಣರ ಮೇಲೆ ಎರಗಿ ಪಟವರ್ಧನ ಸರದಾರನ ದಂಡಾಳುಗಳೆಲ್ಲರೂ ಹೊಗಳುವಂತೆ ಅತುಲವಾದ ಪರಾಕ್ರಮವನ್ನು ತೋರಿಸಿ ಕೀರ್ತಿಯನ್ನು ಸಂಪಾದಿಸಿದನು.

———

ನಿಷ್ಕಾಮಯುದ್ಧ.

## ೭. ಮಹಾತ್ಮನಾದ ಅಲಿ.

ಮಹಾಪುರುಷರಾದ ಮುಹಮ್ಮದ ಪೈಗಂಬರರ ಪ್ರಿಯಶಿಷ್ಯನೂ ಅಳಿಯನೂ ಆದ ಅಲಿಯು ಮಹಾಶೂರನಿದ್ದುದಲ್ಲದೆ ಇಸ್ಲಾಮು ಧರ್ಮದಲ್ಲಿ ಅಧಿಕಾರಸಂಪನ್ನರಾದವರ ಸಲುವಾಗಿ ಯೋಗಸಾಧನಮಾರ್ಗ ಮತ್ತು 'ಸುಫಿ' ಇಲ್ಲವೆ ಫಕೀರ (ವೇದಾಂತದಂಥ) ಮಾರ್ಗ ಇವುಗಳ ಪ್ರವರ್ತಕನೂ ಆಗಿದ್ದನು. ಕರ್ತವ್ಯಬುದ್ಧಿಯಿಂದ ಕರ್ಮಗಳನ್ನು ಮಾಡುತ್ತಿದ್ದ ಆ ಶೂರ ಪುರುಷನು ಒಂದು ದಿವಸ ರಣಭೂಮಿಯಲ್ಲಿ ಶತ್ರುಗಳಲ್ಲೊಬ್ಬನೊಡನೆ ಎಷ್ಟೋ ಹೊತ್ತು ಖಡ್ಗಯುದ್ಧವನ್ನು ಮಾಡಿ ಆ ಹಗೆಯನ್ನು ನೆಲಕ್ಕುರುಳಿಸಿ ಆತನ ಎದೆಯ ಮೇಲೆ ಮೊಳಕಾಲೂರಿ ಶಿರಶ್ಛೇದನ ಮಾಡಲುದ್ಯುಕ್ತನಾದನು. ಆಗ ಆ ವೈರಿಯು—ಗೆದ್ದವನಲ್ಲಿ ತಿರಸ್ಕಾರವನ್ನೂ ಮರಣನಿರ್ಭಯತೆಯನ್ನೂ ತೋರ್ಪಡಿಸುವುದಕ್ಕಾಗಿ ಆ ಮಹಾಪುರುಷನ ಮೋರೆಯ ಮೇಲೆ 'ಥೂ' ಎಂದು ಉಗುಳಿದನು. ಅಲಿಯು ಕೂಡಲೆ ಅವನನ್ನು ಹಾಗೆಯೇ ಬಿಟ್ಟು ಕತ್ತಿಯನ್ನು ಒರೆಗಾಣಿಸಿದನು. ನೆಲದ ಮೇಲೆ ಬಿದ್ದ ವೈರಿಯು ಇದನ್ನು ಕಂಡು ಬೆರಗಾಗಿ ಎದ್ದು ನಿಂತು ತನ್ನನ್ನು ಕೊಲ್ಲದಿರುವ ಕಾರಣವನ್ನು ಕೇಳಲು ಮಹಾತ್ಮನಾದ ಅಲಿಯು-ನಾನು ಸತ್ಯಧರ್ಮಕ್ಕೋಸ್ಕರ ಯುದ್ಧಮಾಡುತ್ತಿದ್ದೆನು. ಆದರಲ್ಲಿ ನನ್ನ ಪ್ರಾಣವಾದರೂ ಹೋಗಬಹುದಾಗಿತ್ತು, ನಿನ್ನ ಪ್ರಾಣವಾದರೂ ಹೋಗಬಹುದಾಗಿತ್ತು; ನನ್ನ ಮನಸ್ಸಿನಲ್ಲಿ ವ್ಯಕ್ತಿವಿಷಯಕದ್ವೇಷವು ಸ್ವಲ್ಪವೂ ಇರಲಿಲ್ಲ; ಆದರೆ ನೀನು ನನ್ನ ಮೋರೆಯ ಮೇಲೆ ಉಗುಳಿದಾಗ ನಿನ್ನ ಮೇಲೆ ವ್ಯಕ್ತಿವಿಷಯಕವಾದ ಸಿಟ್ಟು ನನ್ನ ಮನಸ್ಸಿನಲ್ಲಿ ಹುಟ್ಟಿತು; ಆ ಸಮಯದಲ್ಲಿ ನಿನ್ನ ಶಿರಸ್ಸನ್ನು ಕಡಿದಿದ್ದರೆ ನಿಷ್ಕಾಮಕರ್ಮವನ್ನು ಆಚರಿಸಿದಂತೆ ಆಗುತ್ತಿರಲಿಲ್ಲ. ನನ್ನ ಶತ್ರುವಿನ ಕೊಲೆಯನ್ನು ಮಾಡಿದಂತೆ ಮಾತ್ರ ಆಗುತ್ತಿದ್ದಿತು; ಈಗ ಆ ಸಿಟ್ಟನ್ನು ಬಿಟ್ಟಿರುವೆನು, ನೀನು ಕತ್ತಿಯನ್ನು ತೆಗೆದುಕೊಂಡು ಇಗೊ ಮತ್ತೆ ನನ್ನೊಡನೆ ಯುದ್ಧಕ್ಕೆ ಬರಬಹುದು ಎಂದು ಹೇಳಿದನು. ವೈರಿಯು ಈ ಮಹಾನುಭಾವತೆಯನ್ನು ನೋಡಿ ಮೆಚ್ಚಿ ಮನದಲ್ಲಿ—ಇವನ ಇಸ್ಲಾಮು ಧರ್ಮವು ಎಷ್ಟು ಉದಾರವಾದದ್ದು! ಯಾವ ಧರ್ಮದಲ್ಲಿ ಮನುಷ್ಯನು ದೇವರಿಗೆ ಸಮಾನನಾಗುವನು! ಅವನು (ಪೈಗಂಬರನು) ಎಂಥ ಮಹಾಪುರುಷನಾಗಿರಬಹುದು! ಯಾವನನ್ನು ಹಿಂಬಾಲಿಸಿ ಮನುಷ್ಯನು ಇಷ್ಟೊಂದು

ಮನೋನಿಗ್ರಹವುಳ್ಳವನಾಗುವನು! ಎಂದು ವಿಚಾರಮಾಡಿ ತಾನು ಸೋತೆನೆಂದು ಒಪ್ಪಿಕೊಂಡು ಇಸ್ಲಾಮ್‌ಧರ್ಮವನ್ನು ಸ್ವೀಕರಿಸಿ ಮಹಾವೀರನಾದ ಅಲಿಯ ಸಂಬುಗೆಯ ಸಂಗಡಿಗನಾದನು.

---

ಬ್ರಹ್ಮತೇಜಸ್ಸು.

## ೮. ಮೈಥಿಲ ಪಂಡಿತ.

ಪೇಶವೆಯರ ಕಾಲದಲ್ಲಿ ಪ್ರತಿವರ್ಷ ಶ್ರಾವಣಮಾಸದಲ್ಲಿ ಪುಣೆಯಲ್ಲಿ ದೊಡ್ಡದೊಂದು ಬ್ರಾಹ್ಮಣಸಭೆಯು ನೆರೆಯಿಸಲ್ಪಡುತ್ತಿತ್ತು. ಮಹಾಮಹೋಪಾಧ್ಯಾಯರೆನಿಸಿದ ಪಂಡಿತರು ಈ ಸಭೆಯಲ್ಲಿ ವಾದಕ್ಕಾಗಿ ನೆರೆಯುವರು. ಸಭೆಯಲ್ಲಿ ಸರ್ವಶಾಸ್ತ್ರಪಾರಂಗತನೆಂದು ನಿರ್ಣಯಿಸಲ್ಪಟ್ಟವನಿಗೆ ಪೇಶವೆಯು ೧ ಲಕ್ಷ ರೂಪಾಯಿ ಬಿದಾಗಿ (ಸಂಭಾವನೆ) ಯನ್ನು ಕೊಡುವನು; ಮತ್ತು ಆತನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ತಾನೂ ಆ ಪಲ್ಲಕ್ಕಿಗೆ ಹೆಗಲು ಹತ್ತಿಸಿ ಮೂರು ಹೆಜ್ಜೆ ನಡೆದು ತಾನು ಧನ್ಯನಾದೆನೆಂದು ಭಾವಿಸುವನು. ರಘುನಾಥರಾವ ಪೇಶವೆಯೂ ಈ ಪೂರ್ವಪದ್ಧತಿಯನ್ನು ನಡೆಯಿಸುತ್ತಿದ್ದನು. ಆದರೆ ಹಿಂದಿನ ಪೇಶವೆಗಳಂತೆ ಅವನ ಮನಸ್ಸಿನಲ್ಲಿ ಬ್ರಾಹ್ಮಣಪಂಡಿತರ ವಿಷಯವಾಗಿ ಭಕ್ತಿವಿಶ್ವಾಸಗಳಿರಲಿಲ್ಲ. ಅವನ ಆಳಿಕೆಯಲ್ಲಿ ಒಮ್ಮೆ ಒಬ್ಬ ಮೈಥಿಲದೇಶದ ಪಂಡಿತನು ಬಂದಿದ್ದನು. ಬ್ರಾಹ್ಮಣಸಭೆಯಲ್ಲಿ ಆತನೇ ಎಲ್ಲರಿಗಿಂತ ಶ್ರೇಷ್ಠನೆಂದು ನಿರ್ಣಯವಾಯಿತು. ಆದರೆ ಪೇಶವೆಯು ಆ ಬ್ರಾಹ್ಮಣನ ಸ್ವಭಾವಕ್ಕೆ ಸ್ವಲ್ಪ ಅಸಮಾಧಾನಬಟ್ಟು—ಆ ಬ್ರಾಹಣನಲ್ಲಿ ವಿನಯವು ಕಡಮೆಯಿದ್ದುದರಿಂದ ಅವನಿಗೆ ಬಿದಾಗಿಯಲ್ಲಿ ಒಂದು ರೂಪಾಯಿ ಕಡಮೆ ಕೊಡತಕ್ಕುದೆಂದು ಹೇಳಿದನು. ಆಗ ಪಂಡಿತನು—ಪೂರ್ಣಲಕ್ಷ ರೂಪಾಯಿ ಕೊಟ್ಟರೆ ಆ ಎಲ್ಲ ರೂಪಾಯಿಗಳನ್ನು ಇಲ್ಲಿಯೇ ವೆಚ್ಚಮಾಡಿ ಹೋಗುವುದಕ್ಕೂ ಕೂಡ ನಾನು ಸಿದ್ಧನಿರುವೆನು; ಆದರೆ ನನ್ನಲ್ಲಿ ಏನಾದರೊಂದು ಕುಂದನ್ನಿಟ್ಟು ಗೊತ್ತಾದ ಬಿದಾಗಿಯಲ್ಲಿ ಒಂದೇ ರೂಪಾಯಿ ಕಡಮೆಯಾದರೂ ನಾನು ಆ ಅಪಮಾನಸೂಚಕವಾದ ಸಂಭಾವನೆಯನ್ನು ಸ್ವೀಕರಿಸುವುದಿಲ್ಲ; ನಾನು ಸಮ್ಮಾನಕ್ಕೋಸ್ಕರವಾಗಿಯೇ ಅಲ್ಲಿಂದಿಲ್ಲಿಗೆ ಬಂದಿರುವೆನು; ಸಮ್ಮಾನದಲ್ಲಿ ಒಂದು ಗುಂಜಿತೂಕ ಕಡಿಮೆಯಾದರೂ ನನಗೆ ಒಪ್ಪಿಗೆಯಿಲ್ಲ ಎಂದು ಹೇಳಿದನು. ಅದಕ್ಕೆ ಪೇಶವೆಯು—ಪಂಡಿತಜೀ, ಮಾತನ್ನೇನೋ

ಆಡಿ ಬಿಟ್ಟಿರುವೆನು; 'ಹುಕುಮು'ನ್ನು ಬದಲಿಸಲಾರೆನು, ತಾವು ಒಂದು ರೂಪಾಯಿ ಕಡಮೆ ತೆಗೆದುಕೊಳ್ಳಲೇ ಬೇಕು; ಇಷ್ಟು ರೂಪಾಯಿ ಸಂಭಾವನೆಯನ್ನು ಕೊಡುವಂಥವರು ಎಲ್ಲಿರುವರು? ಎಂದನು. ಅದಕ್ಕೆ ಪಂಡಿತನು— ಮಹಾರಾಜರೇ, ಬ್ರಾಹ್ಮಣನ ಮೇಲೆ ದೃಷ್ಟಿಯಿಟ್ಟು ಕೊಟ್ಟ ಹುಕುಮನ್ನು ಬದಲಿಸಿದರೆ ತಮಗೇನೂ ಕುಂದು ಬರಲಾರದು; ಮಹಾರಾಜರೇ, ಮತ್ತೆ ನಾನು ಹೇಳುವುದೇನೆಂದರೆ—ತಾವು ಹೇಳಿದಂತೆ ಒಂದು ಕಡಮೆ ಲಕ್ಷ ರೂಪಾಯಿ ದಾನಮಾಡತಕ್ಕ ಶ್ರೀಮಂತರು ಈ ಕಾಲದಲ್ಲಿ ಇಡಿ ಭರತಖಂಡದಲ್ಲಿ ವಿರಳರೆಂಬುದೇನೋ ನಿಜವೇ; ಆದರೆ ಲಕ್ಷಕ್ಕೆ ಒಂದು ಕಡಿಮೆಯಾದರೆ ಆ ಹಣವನ್ನು ತೆಗೆದುಕೊಳ್ಳುವುದಕ್ಕೆ ಒಪ್ಪದಿರುವ ದರಿದ್ರರು ಅದಕ್ಕೂ ವಿರಳರಲ್ಲವೇ? ಇದನ್ನು ತಾವು ಗಮನಿಸಬೇಕು ಎಂದು ಹೇಳಿದನು.

ಪೇಶವೆ ತನ್ನ ಹುಕುಮನ್ನು ಬದಲಿಸಲಿಲ್ಲ. ಬ್ರಾಹ್ಮಣನೂ ಆ ಹಣವನ್ನು ಮುಟ್ಟಲಿಲ್ಲ.

---

ಸಹಾನುಭೂತಿಯ ಸುಖ.

## ೯. ಬಿಸ್ಮಾರ್ಕನ ಚಿರೂಟು.

ಕೋನಿಗ್ರಾಟ್ಜದ ಯುದ್ಧದಲ್ಲಿ ಪ್ರಸಿಯನ್ನರು ಆಸ್ಟ್ರಿಯದ ಸೈನ್ಯವನ್ನು ನುಚ್ಚುನುರಿಯಾಗಿ ಕಡಿದು ಚೆಲ್ಲಿದರು. ಆ ಯುದ್ಧದ ದಿವಸ ಪ್ರಸಿಯದ ಮಂತ್ರಿಯಾದ ಪ್ರಿನ್ಸ್ ಬಿಸ್ಮಾರ್ಕನು ತೆರಪಿಲ್ಲದೆ ಓಡಾಡಿ ಬಳಲಿ ಬೆಂಡಾಗಿದ್ದನು. ಎಲ್ಲಿಯಾದರೂ ನೆಲವ ಕಂಡರೆ ಸಾಕೆಂದೆನಿಸಿತ್ತು. ಕಾಳಗವು ಮುಗಿದೊಡನೆ ಎಲ್ಲಾದರೂ ಕೈಕಾಲು ಚಾಚಿ ಅಡ್ಡಾಗಿ ಹತ್ತಿರ ಕಾದಿಟ್ಟುಕೊಂಡಿದ್ದ ಒಂದೇ ಒಂದು ಚಿರೂಟನ್ನು ಸೇದಿ ಬಳಲಿಕೆಯನ್ನು ಕಳೆದುಕೊಳ್ಳಬೇಕೆಂದು ಮಾಡಿದ್ದನು. ಆದರೆ ಅಷ್ಟರಲ್ಲಿ ಅದೇ ರಣರಂಗದಲ್ಲಿ ಒಬ್ಬ ದಂಡಾಳು ಕೈಕಾಲು ಮುರಿದು ಊನನಾಗಿ ಬಿದ್ದಿರುವುದನ್ನು ಕಂಡನು. ಆ ಸೈನಿಕನು ಬಿಸ್ಮಾರ್ಕನನ್ನು ದೈನ್ಯದಿಂದ ನೋಡತೊಡಗಿದನು. ಆಗ ಆತನಿಗೆ ಏನೋ ಬೇಕಾಗಿದೆಯೆಂದು ಬಿಸ್ಮಾರ್ಕನಿಗೆ ಎನಿಸಿತು. ಆತನು ಮರಣೋನ್ಮುಖನಾಗಿರುವದನ್ನು ಕಂಡು ಬಿಸ್ಮಾರ್ಕನು ಕೂಡಲೆ ಕುದುರೆಯನ್ನಿಳಿದು ಆ ಸೈನಿಕನ ಹತ್ತಿರ ಬಂದನು. ಆದರೆ ಅವನಿಗೆ ಏನು ಬೇಕಾಗಿದೆ ಎಂಬುದು ತಿಳಿಯಲೊಲ್ಲದು. ಬಿಸ್ಮಾರ್ಕನ ಬಳಿಯಲ್ಲಿ ಹಣವು ಬೇಕಾದಷ್ಟಿದೆ; ಆದರೆ ಸಾಯಿಸ

ಬಾಯಲ್ಲಿ ಬಿದ್ದವನಿಗೆ ಹಣವೇತಕ್ಕೆ? ಬಿಸ್ಮಾರ್ಕನಿಗೆ ಒಮ್ಮೆಲಿ ಚಿರೂಟಿನ
ನೆನಪಾಯಿತು. ಕೂಡಲೆ ಅದನ್ನು ಹೊತ್ತಿಸಿ ಆ ಸೈನಿಕನ ಬಾಯಲ್ಲಿಟ್ಟನು
ಅದನ್ನು ಸೇದಹತ್ತಿದೊಡನೆ ಸಾವಿನ ಸಂಕಟಕ್ಕೊಳಗಾದ ಆ ಸೈನಿಕನ
ಮುಖದ ಮೇಲೆ ಆನಂದದ ಚಿಹ್ನವು ಹೊಳೆಯಿತು. ಆತನು ಕಣ್ಣಲ್ಲಿ ನೀರು
ತಂದು ಕೃತಜ್ಞತೆಯಿಂದ ತನ್ನನ್ನು ನೋಡಿದುದನ್ನು ಮರೆಯದೆ ನೆನಪಿ
ನಲ್ಲಿಟ್ಟುಕೊಂಡ ಪ್ರಿನ್ಸ್ ಬಿಸ್ಮಾರ್ಕನು ಒಮ್ಮೆ ಮಾತಾಡುವಾಗ ಆ ಸೈನಿಕ
ನನ್ನುಲಕ್ಷಿಸಿ "ಯಾವ ಚಿರೂಟನ್ನು ನಾನು ಸೇದಲಿಲ್ಲವೋ ಅದರಿಂದಾ
ದಷ್ಟು ಆನಂದವು, ಸೇದಿದ ಯಾವ ಚಿರೂಟಿನಿಂದಲೂ ನನಗೆ ಆಗಿಲ್ಲ" ಎಂದು
ನುಡಿದನು.

---

ಸರಳತನವಿಲ್ಲದ ನಡತೆ.

## ೧೦. ಬಗದಾದದ ನಾವಲಿಗನು.

ಬಗದಾದದಲ್ಲಿ ಹಾರುನ್ ಅಲ್‌ರಸಿದ ಎಂಬ ಪ್ರಸಿದ್ಧ ಖಲೀಫನು ಆಗಿ
ಹೋದನು. ಆತನು ಬಹಳ ಧರ್ಮಿಷ್ಠನು. ಅವನ ಕಾಲದಲ್ಲಿ ಒಬ್ಬ ನಾವಲಿ
ಗನು ಕ್ಷೌರದಲ್ಲಿ ಬಹಳ ನಿಪುಣನೆಂದು ಪ್ರಸಿದ್ಧನಾಗಿದ್ದನು. ಶ್ರೀಮಂತರು
ಆತನನ್ನೇ ಕರೆಯುವರು. ದ್ರವ್ಯವು ಹೆಚ್ಚುತ್ತ ನಡೆದಂತೆ ಅವನಲ್ಲಿ ಸೊಕ್ಕು
ಹೆಚ್ಚುತ್ತ ನಡೆಯಿತು. ಬಡವರೊಡನೆ ಉದ್ದಾಮತನದಿಂದ ನಡೆಯಲಾರಂಭಿಸಿ
ದನು. ಒಂದು ದಿವಸ ಒಬ್ಬ ಕಟ್ಟಿಗೆ ಮಾರುವವನು ಕತ್ತೆಯ ಮೇಲೆ ಕಟ್ಟಿಗೆ
ಹೊರೆಗಳನ್ನಿಟ್ಟುಕೊಂಡು ಬರಲು ನಾವಲಿಗನು ಆ ಎಲ್ಲ ಹೊರೆಗಳನ್ನು
ಗುತ್ತಿಗೆಯಿಂದ ಕೊಂಡನು. ಮತ್ತು ಕತ್ತೆಯ ಬೆನ್ನ ಮೇಲಿರುವ ಲಗಳೆಯೂ
ಅದರೊಳಗೇ ಬಂದಿತೆಂದು ಹೇಳಿ ಅದನ್ನು ಕೊಸೆದುಕೊಂಡು ಕಳುಹಿದನು.
ಆ ಕಟ್ಟಿಗೆ ಮಾರುವವನು ಗೋಳಾಡುತ್ತ ಹೋಗುತ್ತಿರುವಷ್ಟರಲ್ಲಿ ಒಬ್ಬ
ಮೌಲ್ವಿಯು ಆತನನ್ನು ನೋಡಿ ಎಲ್ಲ ಸಮಾಚಾರವನ್ನು ಕೇಳಿ ಅವನಿಗೆ
ಕೆಲವು ಹಣವನ್ನು ಕೊಟ್ಟು ಒಂದು ಒಳ್ಳೆಯ ಹಂಚಿಕೆಯನ್ನು ಹೇಳಿದನು.
ಆಗ ಕಟ್ಟಿಗೆಯವನು ಒಬ್ಬನೇ ಮರಳಿ ನಾವಲಿಗನ ಬಳಿಗೆ ಹೋಗಿ-ಗುತ್ತಿಗೆಯ
ವ್ಯಾಪಾರವಾದುದರಿಂದ ಲಗಳೆಯನ್ನು ಕೊಡದೆ ಇದ್ದುದು ತನ್ನದೇ ತಪ್ಪೆಂದು
ಒಪ್ಪಿಕೊಂಡನು. ಆ ಬಳಿಕ ತನ್ನ ಮತ್ತು ತನ್ನ ಸಂಗಡಿಗನ ಕ್ಷೌರಕ್ಕೆ ಏನು
ಬೇಡುವೆಯೆಂದು ಕೇಳಿದನು. ಆಗಲಾ ಸೊಕ್ಕಿನ ನಾವಲಿಗನು ಬಹಳ ತಿರ

ಸ್ಕಾರದಿಂದ ಹೆಚ್ಚಿನ ದರವನ್ನು ಹೇಳಲು ಕಟ್ಟಿಗೆಯುವನು—ಉತ್ತಮ ಕ್ಷೌರವು ಬೇಕಾದರೆ ಹೆಚ್ಚಿಗೆ ಹಣವನ್ನು ಕೊಡಲೇಬೇಕಲ್ಲವೇ ಆಗಲಿ ಎಂದು ಒಪ್ಪಿಕೊಂಡನು. ನಾವಲಿಗನು ಕಟ್ಟಿಗೆಯುವನ ಕ್ಷೌರವನ್ನು ಮುಗಿಸಿದೊಡನೆ ಆ ಕಟ್ಟಿಗೆಯುವನು ಕತ್ತೆಯನ್ನು ಹಿಡಿದು ತಂದು ಈಗ ನನ್ನ ಸಂಗಡಿಗನ ಕ್ಷೌರ ವನ್ನು ಮಾಡು; ನನ್ನ ಸಂಗಡ ಬಂದುದನ್ನು ನೀನು ನೋಡಿಯೇ ಇರುವೆ ಎಂದನು. ನಾವಲಿಗನು ಕತ್ತೆಯ ಕ್ಷೌರಮಾಡುವುದಕ್ಕೆ ಒಪ್ಪದಿರಲು ಕಟ್ಟಿಗೆ ಯುವನು ಈ ವಿಷಯದಲ್ಲಿ ಸರಿಯಾದ ತೀರ್ಪು ದೊರೆಯದಿದ್ದರೆ ನಾನು ಈ ರಾಜ್ಯದಲ್ಲಿಯೇ ನಿಲ್ಲುವುದಿಲ್ಲವೆಂದು ಪಣತೊಟ್ಟು ಅಲ್ಲಿಂದ ಹೊರಟು ನೆಟ್ಟಗೆ ಖಲೀಪನ ಬಳಿಗೆ ಬಂದು ನಡೆದ ಸಮಾಚಾರವನ್ನೆಲ್ಲ ಅರಿಕೆಮಾಡಿಕೊಂಡನು. ನ್ಯಾಯಪಕ್ಷಪಾತಿಯಾದ ಖಲೀಪನು ನಾವಲಿಗನನ್ನು ಕರೆಯಿಸಿ ನೀನು ಒಪ್ಪಿದ ಕೆಲಸವನ್ನು ಇಲ್ಲಿಯೇ ಪೂರ್ಣಮಾಡಬೇಕು ಎಂದನು. ಆ ಬಂಕದ ನಾವಲಿಗನು ಓಲಗದಲ್ಲಿ ಎಲ್ಲರಿದಿರಿಗೆ ಕತ್ತೆಯನ್ನು ಬೋಳಿಸಬೇಕಾಯಿತು.

ಈ ಕಥೆಯು ಹಾಸ್ಯವಿನೋದಗಳಿಗಾಗಿ ಎಲ್ಲ ದೇಶಗಳಲ್ಲಿ ಪ್ರಸಾರವಾಗಿ ಎಲ್ಲರಿಗೆ ಸರಳತನದಿಂದ ನಡೆಯುವ ವಿಷಯದಲ್ಲಿ ಪಾಠವನ್ನು ಕೊಡು ತ್ತಿರುವುದು.

---

ಬ್ರಾಹ್ಮಣನ ಮುಖ್ಯ ಲಕ್ಷಣವು ಕ್ಷಮೆ.

## ೧೧. ವಿಶ್ವಾಮಿತ್ರನೂ ವಶಿಷ್ಠನೂ.

ವಿಶ್ವಾಮಿತ್ರನು ತಪೋಬಲದಿಂದ ಬ್ರಾಹ್ಮಣನಾದ ಬಳಿಕ ವಶಿಷ್ಠನ ಬಳಿಗೆ ಹೋಗಿ ಆತನಿಗೆ ನಮಸ್ಕಾರ ಮಾಡಿದನು. ವಶಿಷ್ಠನು—"ನಿನಗೆ ಜಯವಾಗಲಿ" ಎಂದು ಆಶೀರ್ವಾದ ಮಾಡಿದನು. ಆಗ ವಿಶ್ವಾಮಿತ್ರನು ಬ್ರಹ್ಮನ ಬಳಿಗೆ ಹೋಗಿ ನೀನೇನೋ ನನ್ನನ್ನು ಬ್ರಾಹ್ಮಣನನ್ನು ಮಾಡಿದೆ; ಆದರೆ ವಶಿಷ್ಠನು ನನಗೆ ಬ್ರಾಹ್ಮಣನೆಂದು ಪ್ರತಿನಮಸ್ಕಾರವನ್ನು ಮಾಡಲಿಲ್ಲ ವಲ್ಲ? ಎಂದು ಕೇಳಿದನು. ಆಗ ಬ್ರಹ್ಮನು—ಎಲೈ ವಿಶ್ವಾಮಿತ್ರನೇ, ನೀನು ತಪೋಬಲದಿಂದ ನಿಶ್ಚಯವಾಗಿ ಬ್ರಾಹ್ಮಣನಾಗಿರುವೆ, ವಶಿಷ್ಠನು ಅವಶ್ಯವಾಗಿ ನಿನಗೆ ಪ್ರತಿನಮಸ್ಕಾರವನ್ನು ಮಾಡಲೇಬೇಕು; ಇನ್ನೊಮ್ಮೆ ನೋಡು ಎಂದನು. ವಿಶ್ವಾಮಿತ್ರನು ಮತ್ತೊಮ್ಮೆ ಹೋಗಿ ನಮಸ್ಕಾರಮಾಡಿದನು. ಈ ಸಾರೆಯೂ ಜಯವಾಗಲಿ ಎಂದು ಆಶೀರ್ವಾದವನ್ನೇ ಮಾಡಿದನು. ವಿಶ್ವಾ

ಮಿತ್ರನು ಮತ್ತೆ ಬ್ರಹ್ಮನ ಬಳಿಗೆ ಬಂದು ಅರಿಕೆಮಾಡಿಕೊಳ್ಳಲು ಆಗ ಬ್ರಹ್ಮನು—ಇನ್ನೊ ಒಮ್ಮೆ ಪರೀಕ್ಷಿಸು; ಈ ಬಾರಿಯೂ ನಿನಗೆ ನಮಸ್ಕಾರ ಮಾಡದೆ ಹೋದರೆ ಆತನ ತಲೆಯ ಮೇಲೆ ವಜ್ರಪಾತವಾಗುವುದು ಎಂದು ಹೇಳಿದನು. ಮತ್ತೆ ವಿಶ್ವಾಮಿತ್ರನು ವಶಿಷ್ಠಋಷಿಯ ಆಶ್ರಮದ ಬಳಿಗೆ ಹೋಗಿ—ನಾನು ಈ ಸಾರೆ ನಮಸ್ಕಾರ ಮಾಡಿದ ಬಳಿಕ ವಶಿಷ್ಠನು ಮೊದಲಿನಂತೆ ನಮಸ್ಕಾರ ಮಾಡದೆ ಹೋದರೆ ಪಾಪ! ವಜ್ರಪಾತವಾಗಿ ತನಗೆ ಬ್ರಹ್ಮಹತ್ಯಾದೋಷವು ಘಟಿಸುವುದಲ್ಲವೇ ಎಂದು ಆಲೋಚಿಸಿ ವಶಿಷ್ಠನಿಗೆ ನಮಸ್ಕಾರ ಮಾಡದೆ ಹಾಗೆಯೇ ಹಿಂದಿರುಗಿದನು. ಆಗ ವಶಿಷ್ಠಮಹರ್ಷಿಯು ಎಲೈ ಬ್ರಾಹ್ಮಣನೇ, ನಿನಗೆ ನಮಸ್ಕಾರವು; ಬರಬೇಕು, ಇತ್ತ ದಯೆಮಾಡಿಸಬೇಕು ಎಂದು ವಿಶ್ವಾಮಿತ್ರನನ್ನು ಕರೆದನು. ಆಗ ವಿಶ್ವಾಮಿತ್ರನು ವಶಿಷ್ಠನ ಬಳಿಗೆ ಬಂದು—ನಾನು ಎರಡು ಬಾರಿ ನಮಸ್ಕಾರ ಮಾಡಿದರೂ ಪ್ರತಿನಮಸ್ಕಾರ ಮಾಡದೆ ಈಗ ನೀನಾಗಿಯೇ ಕರೆದು ನಮಸ್ಕಾರಮಾಡುವ ಕಾರಣವೇನು ಎಂದು ಕೇಳಿದನು. ಅದಕ್ಕೆ ವಶಿಷ್ಠನು—ಬ್ರಾಹ್ಮಣನ ಮುಖ್ಯಲಕ್ಷಣವಾದ ಕ್ಷಮಾಗುಣವು ಈಗ ನಿನ್ನಲ್ಲಿ ಉಂಟಾಗಿದೆ; ಈಗ ನೀನು ನಿಜವಾಗಿ ಬ್ರಾಹ್ಮಣನಾಗಿರುವೆ; ಆದುದರಿಂದಲೇ ನಿನ್ನನ್ನು ನಾನಾಗಿ ಕರೆದು ನಮಸ್ಕಾರ ಮಾಡಿದೆನು ಎಂದನು.

---

ಆತ್ಮಜಯ.

## ೧೨. ಹಿಂದುಸಂನ್ಯಾಸಿಯೂ, ಸಿಕಂದರಶಹನೂ.

ಸುಪ್ರಸಿದ್ಧ ವೀರಾಗ್ರೇಸರನಾದ ಸಿಕಂದರಶಹನು (ಮಾಸಿಡೋನಿಯದ ರಾಜನಾದ ಅಲೆಕ್‌ಝಾಂಡರನು) ಪಂಜಾಬವನ್ನು ಜಯಿಸಿ ವಿಜಯೋಲ್ಲಾಸದಲ್ಲಿರುವಾಗ ಒಬ್ಬ ಹಿಂದುಸಂನ್ಯಾಸಿಯ ಪ್ರಸಿದ್ಧಿಯನ್ನು ಕೇಳಿ ಆತನನ್ನು ನೋಡಬೇಕೆಂದು ಇಚ್ಛೆಯನ್ನು ತೋರ್ಪಡಿಸಿದನು. ಕೂಡಲೆ ಸಿಂಕದರನ ಕಾಮದಾರನೊಬ್ಬನು ಆ ಸಂನ್ಯಾಸಿಯ ಬಳಿಗೆ ಹೋಗಿ ಸಿಂಕಂದರಬಾದಶಹನ ದಿಗ್ವಿಜಯದ ವರ್ತಮಾನವನ್ನು ಹೇಳಿ ನೀವು ಆ ಶೂರಪುರುಷನನ್ನು ನೋಡಲಿಕ್ಕೆ ಬರಬೇಕೆಂದು ಹೇಳಿದನು. ಆಗಲಾ ಸಂನ್ಯಾಸಿಯು ಆ ಕಾಮದಾರನನ್ನು ಕುರಿತು ನಿಮ್ಮ ಒಡೆಯನು ಮೊದಲು ತನ್ನನ್ನು ತಾನು ಗೆದ್ದಿರುತ್ತಾನೆಯೇ ಕೇಳಿಕೊಂಡು ಬಾ, ಗೆದ್ದಿದ್ದರೆ ಅವಶ್ಯವಾಗಿ ಕಾಣಲಿಕ್ಕೆ ಬರುವೆನು

ಎಂದು ಹೇಳಿಕಳುಹಿದನು. ಆ ಸಂನ್ಯಾಸಿಯು ಮಾತನ್ನು ಕೇಳಿ ಸಿಕಂದರನು ಬೆರಗಾಗಿ ತಾನೇ ಆತನ ದರ್ಶನಕ್ಕೆ ಬಂದು ಆ ಸಾಧುವನ್ನು ಕುರಿತು, ತಮ್ಮ ಯಾವ ಬಯಕೆಯನ್ನು ಪೂರ್ಣಮಾಡಲಿ ಎಂದು ವಿನಯದಿಂದ ಕೇಳಿದನು. ಮಹಾತ್ಮರಾದ ಸಾಧುಗಳು ಎಲ್ಲ ಕಾಲದಲ್ಲಿಯೂ ಯಾರಿಗೆ ಯಾವ ಉಪದೇಶವು ಅತ್ಯಂತ ಪ್ರಯೋಜನಕರವೋ ಅದನ್ನೇ ಮಾಡುತ್ತ ಬಂದಿರುವರು. ಆಗ ಸಂನ್ಯಾಸಿಯು—ನೀನು ಯಾವುದನ್ನು ಕೊಡಲಾರೆಯೋ ಅದನ್ನು ಅಪಹರಿಸಬೇಡ ಎಂದು ಉಪದೇಶಿಸಿದನು. ದಿಗ್ವಿಜಯಿಯಾದ ಸಿಕಂದರಶಹನು ಈ ಮಾತಿನ ಅರ್ಥವನ್ನು ತಿಳಿಯದಾದನು; ಆಗ ಸಂನ್ಯಾಸಿಯು—ನೀನು ಪ್ರಾಣಿಗಳಿಗೆ ಪ್ರಾಣವನ್ನು ಕೊಡಲಾರೆ; ಆದುದರಿಂದ ಪ್ರಾಣಿಗಳ—ಮನುಷ್ಯರ—ಪ್ರಾಣವನ್ನು ಅಪಹರಿಸಬೇಡ. ನಮಗೆ ನೀನು ಬಿಸಿಲನ್ನು ಕೊಡಲಾರೆ; ಆದುದರಿಂದ ನಮ್ಮ ಹತ್ತಿರ ಅಡ್ಡನಿಂತು ನೆಳಲು ಕಟ್ಟಿ ನಮ್ಮ ಬಿಸಿಲನ್ನು ತಡೆಯಬೇಡ ಎಂದು ಹೇಳಿ, ಜನರ ಕೊಲೆ ಮಾಡುವುದರಲ್ಲೇನೂ ಪೌರುಷವಿಲ್ಲ, ಆದುದರಿಂದ ಅದನ್ನು ಇನ್ನು ಮಾಡಬೇಡ; ಯುದ್ಧಗಳಲ್ಲಿ ಲಕ್ಷಾವಧಿ ಜನರ ಪ್ರಾಣವನ್ನು ಅಪಹರಿಸಬೇಡ ಎಂದು ಉಪದೇಶಮಾಡಿ ಕಳುಹಿದನು.

---

ಆತ್ಮಾರ್ಪಣ.

## ೧೩. ಐದುಜನ ಶೀಖರು.

ಔರಂಗಜೇಬ ಬಾದಶಹನ ದವಡೆಯಲ್ಲಿ ಸಿಕ್ಕಿದ ಶೀಖರ ಗುರುಗೋವಿಂದಸಿಂಹನು ಮುಸಲ್ಮಾನರ ಪಾರುಪತ್ಯಕ್ಕಾಗಿ ಶ್ರೀನಯನಾದೇವಿಯ ಉಪಾಸನೆ ಮಾಡಿ ವರವ ಪಡೆದನು. ದೇವಿಯ ಆಲಯದಿಂದ ಮರಳಿ ಮನೆಗೆ ಬಂದಬಳಿಕ ಆತನು ಎಲ್ಲ ಶೀಖ (ಶಿಷ್ಯ) ರನ್ನು ಒಟ್ಟುಗೂಡಿಸಿದನು. ಯುದ್ಧಕ್ಕೆ ಹೊರಡಬಹುದಾದ ಶೀಖರ ಸಂಖ್ಯೆಯು ಐದುಸಾವಿರ ಮಾತ್ರವಾಯಿತು. ಆಗ ಗುರುಗೋವಿಂದಸಿಂಹನು ತನ್ನ ಸೈನಿಕರಿಗೆ ಹೇಳಿದ ಮಾತುಗಳನ್ನೇ ಯುದ್ಧದ ಆರಂಭದಲ್ಲಿ ಟ್ರಾನ್ಸವಾಲದ ಪ್ರೆಸಿಡೆಂಟ್ ಕ್ರೂಗರನು ಬೋಅರ್ ಜನರನ್ನು ಹುರುಪುಗೊಳಿಸುವದಕ್ಕೆ ಹೇಳಿದನು. ಅವೇನೆಂದರೆ:—"ನೀವು ಸ್ವಲ್ಪಜನರು; ಆದರೆ ಭಯವೇನು? ದೇವರ ಅನುಗ್ರಹದಿಂದ ನೀವು ಒಗೆದ ಶಸ್ತ್ರಗಳು ವೈರಿಗಳಿಗೆ ತಗುಲಿ, ಅವರ ಶಸ್ತ್ರಗಳು ನಿಮಗೆ ತಗುಲದಿದ್ದರೆ ನೀವು ಜಯಶೀಲರಾಗುವಿರಿ." ತಮ್ಮವರ ಸಂಖ್ಯೆಯು ಅಲ್ಪವಿದ್ದಾಗ ಧರ್ಮದಲ್ಲಿ ದೃಢವಿಶ್ವಾಸವುಳ್ಳ ಸೇನಾಪತಿಗಳು ಬಹುಶಃ ಈ ಮಾತುಗಳನ್ನೇ ನುಡಿಯುವರು.

ಬಳಿಕ ಗೋವಿಂದಸಿಂಹನು ಆ ಸೈನಿಕರೆಲ್ಲರನ್ನು ಕುರಿತು--ಈಗ ಶ್ರೀ ನಯನಾದೇವಿಗೆ ಐದು ನರಬಲಿಗಳನ್ನು ಕೊಡಬೇಕಾಗಿದೆ; ನರಬಲಿಯಿಲ್ಲದೆ ಸಿದ್ಧಿಯಾಗದು; ಎಂದು ನುಡಿದನು. ಕೂಡಲೆ ಒಬ್ಬ ಬಡಗಿ ಜಾತಿಯ ಶೀಖನು ತನ್ನನ್ನು ಬಲಿಕೊಡಬಹುದೆಂದು ಗುರುವಿನ ಬಳಿಯಲ್ಲಿ ಬಂದು ನಿಂತನು. ಬಳಿಕ ಕ್ಷತ್ರಿಯ ಜಾತಿಯವನೊಬ್ಬನು ಬ್ರಾಹ್ಮಣನೊಬ್ಬನು, ಈ ಮೇರೆಗೆ ಐವರು ಸ್ವಲ್ಪ ವೇಳೆಯಲ್ಲಿ ಬಂದು ನಿಂತರು. ಬಳಿಕ ಗೋವಿಂದಸಿಂಹನು ಅವರಲ್ಲೊಬ್ಬನನ್ನು ಒಂದು ಡೇರೆಯಲ್ಲಿ ಕರೆದೊಯ್ದು ಅಲ್ಲಿ ಒಂದು ಬಾಯಿ ಕಟ್ಟಿದ ಹೋತನ್ನು ಕೊಯ್ದು ರಕ್ತ ಹತ್ತಿದ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ಹೊರಗೆ ಬಂದನು. ಈ ಮೇರೆಗೆ ಐದು ಜನರನ್ನೂ ಪರೀಕ್ಷಿಸಿ ಬಳಿಕ ಅವರನ್ನು ಡೇರೆಯಿಂದ ಹೊರಗೆ ಕರೆದು ನೆರೆದ ಎಲ್ಲ ಜನರಿದಿರಿಗೆ ಆ ಐವರನ್ನು ಕುರಿತು—ನೀವು ದೇವಿಗೆ ಅರ್ಪಿಸಲ್ಪಟ್ಟಿರುವಿರಿ. ಈಗ ನಿಮ್ಮ ದೇಹಜೀವಗಳು ನಿಮ್ಮವಲ್ಲ; ದೇವಿಯ ಕಾರ್ಯಕ್ಕಾಗಿ-ದುಷ್ಟರ ಶಾಸನಮಾಡಿ ಧರ್ಮವನ್ನು ಕಾಪಾಡಿಕೊಳ್ಳುವುದಕ್ಕಾಗಿ—ನೀವು ಸಿದ್ಧರಾಗಿರಿ; ನಿಮ್ಮೈವರನ್ನು ಒಂದೊಂದು ಸಾವಿರ ಸೇನೆಯ ಅಧಿಪತಿಗಳನ್ನಾಗಿ ಮಾಡಿದ್ದೇನೆ; ಎಂದು ಹೇಳಿದನು.

ಆತ್ಮಾರ್ಪಣವೇ ನರಬಲಿಯು. ಪಶುಗಳನ್ನು ಕೊಯ್ದಂತೆ ಮನುಷ್ಯರನ್ನು ದೇವತೆಗಳಿದಿರಿಗೆ ಕೊಯ್ದರೆ ಅದು ನರವಧೆಯೆನಿಸುವದು.

ಗುರುಗೋವಿಂದಸಿಂಹನು ನೆರೆದ ಸೈನಿಕರಲ್ಲಿ ಸುಲಭವಾಗಿ ಐದುಜನ ಸೇನಾಪತಿಗಳನ್ನು ಆರಿಸಿದನು; ಮತ್ತು ನರಬಲಿಯ ನಿಜವಾದ ಅರ್ಥವನ್ನು ವ್ಯಕ್ತಗೊಳಿಸಿದನು. ಈ ಐವರು ಮಾಡಿದ ಆತ್ಮಾರ್ಪಣವು ಸಾಮಾನ್ಯವಾದುದಲ್ಲ. ಇದು ವಿಪತ್ತು ಒದಗಿದಾಗ ಇಲ್ಲವೆ ಕಾದಾಟ ನಡೆದಾಗ ತಾತ್ಕಾಲಿಕ ಉತ್ತೇಜನದಿಂದ ಸಾವಿಗೆ ಹೆದರದೆ ಮುಂದೆ ಹೋಗುವಂತಹ ಸಾಹಸವಲ್ಲ. ರಕ್ತವು ಕಾಯದಿರುವಾಗ ದೃಢಮನಸ್ಸಿನಿಂದ ಸ್ವದೇಶಸ್ವಧರ್ಮಗಳ ಸಂರಕ್ಷಣಕ್ಕಾಗಿ ಗುರುಭಕ್ತಿಪ್ರೇರಣೆಯಿಂದ ಮಾಡಿದ ಆತ್ಮಸಮರ್ಪಣವು. ಇವರು ಸಮರಾಂಗಣದಲ್ಲಿ ಎಂದೂ ಬೆನ್ನು ತೋರಿಸಲಿಲ್ಲ. ಧೈರ್ಯದಿಂದ ಯುದ್ಧಮಾಡಿ ಧಾರಾತೀರ್ಥದಲ್ಲಿ ಸ್ನಾನಮಾಡಿದರು. ಇವರ ಹೆಸರುಗಳು ಪ್ರಸಿದ್ಧವಾಗಿಲ್ಲವಾದರೂ ಮಹಾತ್ಮರೆಂಬುದರಲ್ಲಿ ಸಂಶಯವಿಲ್ಲ. ಗುರುಗೋವಿಂದ

ಸಿಂಹನು ಹೇಳಿದುದೇನೆಂದರೆ—"ಆತ್ಮಸಂಯಮನ ಮಾಡಬಲ್ಲವನೂ, ವೈರಾಗ್ಯಶೀಲನೂ, ಪರೋಕ್ಷವಿಚಾರವುಳ್ಳವನೂ ಆದವನೇ ಬ್ರಾಹ್ಮಣನು; ಯುದ್ಧದಲ್ಲಿ ನಿರ್ಭಯನೂ ಅಚಲನೂ ಆದವನೇ ಕ್ಷತ್ರಿಯನು."

---

ಒಡೆಯನ ಸಹಾನುಭೂತಿ.

## ೧೪. ಮಹಾತ್ಮನಾದ ಅಲಿ.

ಮಹಾತ್ಮನಾದ ಅಲಿಯು ಮುಸಲ್ಮಾನರ ಖಲೀಫನಾಗಿರುವ ಕಾಲದಲ್ಲಿ ಒಂದು ದಿವಸ ನಮಾಜು ಮುಗಿದ ಬಳಿಕ ಆತನು ಧರ್ಮೋಪದೇಶ ಮಾಡುತ್ತಿರುವಾಗ ಒಬ್ಬ ಅರಬನು ಆತನಿಗೆ ಮನಬಂದಂತೆ ಬಯ್ದು ನಿನ್ನ ಖಲೀಫ-ಪದವಿಯನ್ನು ಬಿಡು ಎಂದು ಹಳಿದನು. ಸುತ್ತಲೂ ನಿಂತಿದ್ದ ಭಕ್ತಿವಂತರಾದ ಮುಸಲ್ಮಾನರು ತಮ್ಮ ಪರಮ ಗುರುವಾದ ಮುಹಮ್ಮದ ಪೈಗಂಬರನ ಪ್ರೀತಿಯ ಅಳಿಯನೂ, ತಮ್ಮ ಮುಂದಾಳುವೂ, ಧರ್ಮಗುರುವೂ ಆದ ಅಲಿಗೆ ಈ ತರದಿಂದ ಅಪಮಾನ ಮಾಡಿದುದಕ್ಕೆ ಆ ಅರಬನ ಮೇಲೆ ಅತಿಶಯವಾಗಿ ಸಿಟ್ಟಾಗಿದ್ದರು. ಆದರೆ ಧರ್ಮೋಪದೇಶವು ಮುಗಿದ ಬಳಿಕ ಮಹಾತ್ಮನಾದ ಅಲಿಯು ಸ್ವಲ್ಪ ಕೂಡ ಕೋಪವನ್ನು ಮಾಡಿಕೊಳ್ಳದೆ ಶಾಂತತನದಿಂದ—ಆ ಮನುಷ್ಯನ ಪ್ರೀತಿಯ ಜನರು ಯಾರಾದರೂ ತೀರಿಕೊಂಡಿರುವರೇ, ಆತನಿಗೆ ಸಾಲದ ತೊಂದರೆಯಾಗಿದೆಯೇ, ಊಟಕ್ಕೆ ದೊರೆತಿಲ್ಲವೇ ಏನಾಗಿದೆ ನೋಡಿರೆಂದು ತನ್ನವರಿಗೆ ಹೇಳಿದನು. ಅವರು ಅಲ್ಲಲ್ಲಿ ಕೇಳಿನೋಡಲು ಸಾಲವು ನಿಂತುದಕ್ಕಾಗಿ ಸಾವುಕಾರನು ಆತನನ್ನು ಸೆರೆಯಲ್ಲಿರಿಸಿದ್ದನೆಂದು ಗೊತ್ತಾಯಿತು. ಮಹಾತ್ಮನಾದ ಅಲಿಯು ತನ್ನ ಮನೆಯ ಹಣದಿಂದ ಆ ಬಡವನ ಸಾಲವನ್ನು ತೀರಿಸಿದನು. ಆ ಅರಬನು ಕೃತಜ್ಞತೆಯಿಂದ ಕಡೆತನಕ ಅಲಿಯ ಅನುಚರನಾಗಿ ವಿಶ್ವಾಸುಕ ಶಿಷ್ಯನಾಗಿದ್ದನು. ಮಹಾತ್ಮನಾದ ಅಲಿಯು ಈ ಸಮಯದಲ್ಲಿ ನುಡಿದುದೇನೆಂದರೆ—ಸಾಧಾರಣ ಮನುಷ್ಯನು ತನ್ನ ಅಳವನ್ನು ಮೀರಿ, ಉಚ್ಚಪದದಲ್ಲಿದ್ದ ಮನುಷ್ಯನನ್ನು ಅಪಮಾನಗೊಳಿಸಲುದ್ಯುಕ್ತನಾದರೆ ಆಗ ಆತನಿಗೆ ಅಸಹ್ಯವಾದ ಕಷ್ಟವು ಒದಗಿದೆಯೆಂದು ತಿಳಿದು ಆ ಕಷ್ಟವನ್ನು ಹೋಗಲಾಡಿಸಲು ಪ್ರಯತ್ನಿಸುವುದು ಉಚಿತವು. ಉಚ್ಚಪದಸ್ಥನು ಆಗ ತಾನೂ ಸಿಟ್ಟಾದರೆ ತನ್ನ ಕರ್ತವ್ಯವನ್ನು ಪಾಲಿಸಿದಂತಾಗುವುದಿಲ್ಲ. ಎಲ್ಲ ದೇಶಗಳಲ್ಲಿ ಎಲ್ಲ ಕಾಲದಲ್ಲಿ—ಪರಿವಾರದಲ್ಲಿ, ಆಫೀಸಿನಲ್ಲಿ, ಕಾರಖಾನೆಯಲ್ಲಿ ಉಚ್ಚಪದದಲ್ಲಿದ್ದವರು ಮಹಾಪುರುಷನ ಈ ಉಪದೇಶವನ್ನು ನೆನಪಿನಲ್ಲಿಡುವುದು ಅವಶ್ಯವು.

---

ಸಮಯನಿಷ್ಠತೆ.

## ೧೫. ವಾಶಿಂಗ್ಟನ್.

ಅಮೇರಿಕದ ಸಂಯುಕ್ತ ಸಂಸ್ಥಾನಗಳ ರಾಜ್ಯವನ್ನು ಸ್ಥಾಪಿಸಿದ ಮಹಾನುಭಾವನಾದ ಜಾರ್ಜ್ ವಾಶಿಂಗ್ಟನ್ನನ ಸೆಕ್ರೆಟರಿಯು ಹೊತ್ತಿಗೆ ಸರಿಯಾಗಿ ಬರುವುದಕ್ಕೆ ಎರಡು ದಿವಸ ಸ್ವಲ್ಪ ಸ್ವಲ್ಪ ತಡವಮಾಡಿದನು; ಮತ್ತು ತನ್ನ ಗಡಿಯಾರವು ಸರಿಯಾಗಿ ನಡೆಯದಿರುವುದರಿಂದ ತಡವಾಯಿತೆಂದು ಹೇಳಿದನು. ಮರುದಿವಸ ವಾಶಿಂಗ್ಟನ್ನನು—ಅಯ್ಯಾ, ಈ ರೀತಿ ಇನ್ನು ಸಾಗದು; ನೀನು ಹೊಸ ಗಡಿಯಾರವನ್ನು ಹುಡುಕು, ಇಲ್ಲವೆ ನಾನು ಹೊಸ ಸೆಕ್ರೆಟರಿಯನ್ನು ಹುಡುಕಿಕೊಳ್ಳುವೆನು; ಎಂದು ಹೇಳಿದನು.

---

ಭಕ್ತಿ.

## ೧೬. ಸೂಜಿಯ ಎಜ್ಜದಲ್ಲಿ ಆನೆಯನ್ನು ಹಾಯಿಸುವದು.

ನಾರದಋುಷಿಯು ಲೋಕಸಂಚಾರ ಮಾಡುತ್ತ ಮಾಡುತ್ತ ಒಂದಾ ನೊಂದು ದಿವಸ ಒಂದು ತಪೋವನದಲ್ಲಿ ಒಬ್ಬ ತಪಸ್ವಿಯು ಒಂದು ಅರಳೆ ಮರದಡಿಯಲ್ಲಿ ತಪಸ್ಸು ಮಾಡುತ್ತ ಕುಳಿತಿರುವುದನ್ನು ಕಂಡು ಅಲ್ಲಿಗೆ ಬಂದನು. ಬಳಿಯಲ್ಲಿಯೇ ಹುಚ್ಚನಂತಿರುವ ಇನ್ನೊಬ್ಬನೂ ದೇವರ ಧ್ಯಾನ ಮಾಡುತ್ತ ಬಿದ್ದಿದ್ದನು. ನಾರದನನ್ನು ಕಂಡು ತಪಸ್ವಿಯು—ಸ್ವಾಮಿಾ, ದೇವರ ಬಳಿಗೆ ಹೋದಾಗ ನಾನು ಹೀಗೆಯೇ ಇನ್ನೆಷ್ಟು ಕಾಲ ತಪಸ್ಸು ಮಾಡಬೇಕಾಗುವುದೆಂಬದನ್ನು ದಯೆಮಾಡಿ ಕೇಳಿ ತಿಳಿಸಬೇಕು; ಎಂದು ಬೇಡಿಕೊಂಡನು. ಆಗ ಆ ಹುಚ್ಚನೂ ಹೀಗೆಯೇ ಬೇಡಿಕೊಂಡನು. ನಾರದನು ದೇವರ ಬಳಿಯಲ್ಲಿ ಇವರಿಬ್ಬರ ಬೇಡಿಕೆಯನ್ನೂ ಅರುಹಿದನು. ಆಗ ಪರಮೇಶ್ವರನು—ತಪಸ್ವಿಯು ಆ ಅರಳೆಮರದ ಎಲೆಗಳಷ್ಟು ವರ್ಷ ಜನ್ಮ ಜನ್ಮಾಂತರಗಳಲ್ಲಿ ತಪಸ್ಸು ಮಾಡಿದಾಗ ಆತನಿಗೆ ಮುಕ್ತಿ ದೊರೆಯಬಹುದು; ಹುಚ್ಚನಂತೆ ಬಿದ್ದಿರುವವನು ಸ್ವಲ್ಪ ಗುರೂಪದೇಶವಾದರೆ ಕೂಡಲೆ ಮುಕ್ತ ನಾಗುವನು ಎಂದು ಹೇಳಿದನು. ನಾರದನು ಇದು ಹೇಗೆ ಎಂದು ಆಶ್ಚರ್ಯ ಬಡಲು ಪರಮೇಶ್ವರನು—ನೀನು ಈಗ ಹೋಗಿ ಈ ಮಾತನ್ನು ಪರೀಕ್ಷಿಸು; ಅವರಿಬ್ಬರನ್ನೂ ಕುರಿತು—ಪರಮೇಶ್ವರನು ಸೂಜಿಯ ಎಜ್ಜದಲ್ಲಿ ಆನೆಯನ್ನು ಹಾಯಿಸುವ ಕೆಲಸದಲ್ಲಿ ತೊಡಗಿದುದರಿಂದ ಆ ಕೆಲಸವನ್ನು ಮುಗಿಸಿ ನಿಮ್ಮ ಮಾತಿಗೆ ಉತ್ತರಕೊಡುತ್ತೇನೆಂದನು, ಎಂದು ಹೇಳಿನೋಡು, ಮನ

ಗಾಣುವೆ ಎಂದು ನುಡಿದನು. ಆಗ ನಾರದನು ಅಲ್ಲಿಗೆ ಬಂದು ಪರಮೇಶ್ವರನು ಸೂಜಿಯ ಎಜ್ಜದಲ್ಲಿ ಆನೆಯನ್ನು ಹಾಯಿಸುವ ಕೆಲಸವನ್ನು ಮುಗಿಸಿ ನಿಮ್ಮ ಮಾತಿನ ಉತ್ತರವನ್ನು ಕೊಡುವನು; ಎಂದು ಹೇಳಿದನು. ಈ ಮಾತನ್ನು ಕೇಳಿ ತಪಸ್ವಿಯು——ಹಾಗಾದರೆ ನನಗೆ ಮೋಕ್ಷದ ಆಶೆಯಿಲ್ಲವೆಂದೇ ಹೇಳಿದಂತಾಯಿತು. ಈ ಅಸಂಭವದ ಕೆಲಸವು ಸಂಭವಿಸಿದ ಮೇಲಲ್ಲವೇ ನನ್ನ ವಿಚಾರ! ಎಂದು ತಪಸ್ಸನ್ನು ಬಿಟ್ಟು ಎದ್ದು ಹೊರಟುಹೋದನು. ಹುಚ್ಚನು—ಸ್ವಾಮಿ, ಯಾವನು ಪರಮಾಣುವಿಗಿಂತ ಪರಮಪರಮಾಣುವಾಗಬಲ್ಲನೋ ಯಾವಾತನು ಈ ಬ್ರಹ್ಮಾಂಡವನ್ನೆಲ್ಲ ಅಣುವಿಗಿಂತ ಸಣ್ಣದನ್ನಾಗಿ ಮಾಡಬಲ್ಲನೋ ಅಂತಹ ಪರಮೇಶ್ವರನಿಗೆ ಈ ಕೆಲಸವು ಅಸಾಧ್ಯವೇ ? ಸ್ವಲ್ಪಹೊತ್ತು ಕಾದು ಆನೆಯನ್ನು ಹಾಯಿಸಿದೊಡನೆ ನನ್ನ ಮಾತನ್ನು ಕೇಳಿಕೊಂಡು ಬರಬಾರದೇ ಎಂದು ದೈನ್ಯದಿಂದ ನುಡಿದನು. ಆಗ ನಾರದನು ಪರಮೇಶ್ವರನು ಹೇಳಿದುದನ್ನು ಮನಗಂಡನು. ಹುಚ್ಚನಂತಿದ್ದವನು ಆಗಲೇ ಮುಕ್ತಸ್ಥಿತಿಯಲ್ಲಿದ್ದಾನೆಂದು ತಿಳಿಯಬಂದಿತು. ಆತನಿಗೆ ಬ್ರಹ್ಮೋಪದೇಶ ಮಾಡಿ ಮೋಕ್ಷದ ದಾರಿಯನ್ನು ತೋರಿಸಿ ನಾರದನು ಹೊರಟುಹೋದನು.

---

ಉಪದೇಶದ ಸಾಮರ್ಥ್ಯ.

## ೧೭. ಬೆಲ್ಲ ತಿನ್ನುವ ಹುಡುಗ.

ಒಬ್ಬ ಗೃಹಸ್ಥನು ತನ್ನ ಎಂಟು ವರ್ಷದ ಮಗನನ್ನು ಸಂಗಡ ಕರೆದುಕೊಂಡು ಒಬ್ಬ ಸಾಧುವಿನ ಬಳಿಗೆ ಹೋಗಿ——ಸ್ವಾಮಿ, ಈ ಹುಡುಗನು ದಿನಾಲು ಬಹಳ ಬೆಲ್ಲವನ್ನು ತಿನ್ನುವನು, ಕೊಡದಿದ್ದರೆ ಅತಿಶಯವಾಗಿ ಅಳುವನು; ಅದರಿಂದ ಈತನ ಪ್ರಕೃತಿ ಕೆಡುತ್ತಿದೆ; ತಾವು ಹೇಗಾದರೂ ಮಾಡಿ ಬೆಲ್ಲ ತಿನ್ನುವುದನ್ನು ಬಿಡಿಸಬೇಕು; ಎಂದು ಕೇಳಿಕೊಂಡನು. ಆಗಲಾ ಸಾಧುವು—ಅಯ್ಯಾ, ಇನ್ನು ಹದಿನೈದು ದಿವಸಗಳ ತರುವಾಯ ಮಗನೊಡನೆ ಬಾ ಎಂದು ಹೇಳಿ ಕಳುಹಿದನು. ಆ ಗೃಹಸ್ಥನು ಸಾಧುವಿನ ಹೇಳಿಕೆಯಂತೆ ಮತ್ತೆ ಮಗನನ್ನು ಕರೆದುಕೊಂಡು ಬಂದನು. ಆಗ ಸಾಧುವು ಆ ಹುಡುಗನ ಕೈಯನ್ನು ಹಿಡಿದು ಮೈಮೇಲೆ ಕೈಯಾಡಿಸುತ್ತ——ತಮ್ಮಾ, ಇನ್ನು ಬೆಲ್ಲ ತಿನ್ನುವದನ್ನು ಬಿಡು; ಕೊಡದಿದ್ದರೆ ಅಳಲೂ ಬೇಡ ಎಂದು ಪ್ರೀತಿಯ ದನಿಯಿಂದ ಹೇಳಿದನು. ಅಂದಿನಿಂದ ಆ ಹುಡುಗನು ಬೆಲ್ಲ ತಿನ್ನುವದನ್ನು ಬಿಟ್ಟುಬಿಟ್ಟನು; ಅಳುವೂ ಹೋಯಿತು. ಮುಂದೆ ಹತ್ತೆಂಟು ದಿವಸಗಳನ್ನು ನೋಡಿ

ಆ ಗೃಹಸ್ಥನು ಮತ್ತೆ ಸಾಧುವಿನ ಬಳಿಗೆ ಬಂದು ತನ್ನ ಹೇಳಿಕೆಯು
ನನ್ನ ಮಗನ ಮೇಲೆ ಚೆನ್ನಾಗಿ ನಾಟಿತು ಎಂದು ಕೊಂಡಾಡಿ ಬಳಿಕ—ಮಹಾ
ಸ್ವಾಮಿ, ತಮ್ಮ ಒಂದು ಮಾತಿನಿಂದ ಕೆಲಸವಾಗುತ್ತಿರಲು, ಮೊದಲು ಬಂದಾ
ಗಲೇ ನನ್ನ ಕೆಲಸವನ್ನು ತೀರಿಸದೆ ಹದಿನೈದು ದಿನಗಳನ್ನು ಬಿಟ್ಟು ಬರಹೇಳಿದ
ಕಾರಣವೇನು ದಯೆಮಾಡಿ ಹೇಳಬೇಕು ಎಂದು ಕೇಳಿದನು. ಆಗ ಸಾಧುವು
ನಗುಮೊಗದಿಂದ—ಅಯ್ಯಾ, ಯಾವ ಮಾತನ್ನು ನಾವು ನಡೆಸುವದಿಲ್ಲವೋ
ಆ ಮಾತನ್ನು ಮುಂದಿಗೆ ಹೇಳ ಹೋದರೆ ಆ ಉಪದೇಶದಲ್ಲಿ ಸಾಮರ್ಥ್ಯವು
ಬರುವುದಿಲ್ಲ. ನಾನು ಬೆಲ್ಲ ತಿನ್ನುವುದನ್ನು ಬಿಟ್ಟವನಲ್ಲ; ಆಹಾರದಲ್ಲಿ ಸ್ವಲ್ಪ
ಬೆಲ್ಲವು ಸೇರುವುದು. ನಾನು ಮೊದಲು ಬೆಲ್ಲವನ್ನು ಬಿಟ್ಟು ಅದರ ಆಶೆ ಕಡಿದು
ಹೋದ ಬಳಿಕ ಹದಿನೈದು ದಿನಗಳನ್ನು ಪರೀಕ್ಷಿಸಿ ಬೆಲ್ಲ ತಿನಬೇಡವೆಂದು
ಉಪದೇಶಿಸುವುದಕ್ಕೆ ತಕ್ಕವನಾಗಿ ಮನಸ್ಸಿನ ಎಲ್ಲ ಬಲವನ್ನು ಉಪಯೋಗಿಸಿ
ನಿಮ್ಮ ಮಗನಿಗೆ ಉಪದೇಶಿಸಲು ಅದರ ಪರಿಣಾಮವಾಯಿತು. ಎಂದು
ಹೇಳಿದನು.

ಉಪದೇಶಕನು ಬಹು ಸಾಧನದಿಂದ ಮಾನಸಿಕಬಲವನ್ನು ತಂದು
ಕೊಳ್ಳಬೇಕಾಗುವುದು.

---

ಕೊಂಕುತನ

## ೧೮. ಶಾಯಿಲಕ್.

ಸೆಕ್ಸಪಿಯರ್ ಕವಿಯು ತನ್ನ "ಮರ್ಚಂಟ್ ಆಫ್ ವ್ಹೆನಿಸ್" ಎಂಬ
ಗ್ರಂಥದಲ್ಲಿ ಕೊಂಕುತನದ ನಡತೆಯ ಒಂದು ಕಥೆಯನ್ನು ಗ್ರಥಿತಮಾಡಿರು
ವನು. ಅಂಟೋನಿಯೋ ಎಂಬ ಕ್ರಿಶ್ಚಿಯನ್ ವ್ಯಾಪಾರಿಯು ಕಡಮೆ ಬಡ್ಡಿಗೆ
ಸಾಲಕೊಡುತ್ತಿದ್ದುದರಿಂದ ಬಡ್ಡಿಯ ವ್ಯವಹಾರ ಮಾಡುತ್ತಿದ್ದ ಯಹೂದಿ
ಯಾದ ಶಾಯಿಲಕನು ಆತನನ್ನು ದ್ವೇಷಿಸುತ್ತಿದ್ದನು. ಒಂದು ವಿಶೇಷ
ಸಮಯವು ಬಂದುದರಿಂದ ಅಂಟೋನಿಯೊ ಶಾಯಿಲಕನ ಬಳಿಯಲ್ಲಿ ಸಾಲ
ಬೇಡಹೋದನು. ಈ ಸುಸಂಧಿಯನ್ನು ಸಾಧಿಸಿ ಶಾಯಿಲಕನು ಹಗೆತನವನ್ನು
ತೀರಿಸಿಕೊಳ್ಳುವ ಹವಣಿಕೆಯಿಂದ ಸಾಲದ ಕಾಗದದಲ್ಲಿ—ಗಡುವಿಗೆ ಸರಿಯಾಗಿ
ಅಂಟೋನಿಯೋ ಸಾಲವನ್ನು ತೀರಿಸದಿದ್ದರೆ ತನ್ನ ಒಡಲ ಮಾಂಸವನ್ನು
ಎರಡು ಸೇರು ಕೊಡಬೇಕು ಎಂದು ಕರಾರು ಬರೆಯಿಸಿದ್ದನು. ದುರ್ದೈವದಿಂದ
ಅಂಟೋನಿಯೋ ತಕ್ಕ ಕಾಲಕ್ಕೆ ಸಾಲದ ಹಣವನ್ನು ಮುಟ್ಟಿಸಲಿಲ್ಲ. ಮುಂದೆ

ಅಂಟೋನಿಯೋ ಈ ಹಾನಿಯ ಪೂರೈಕೆಯೆಂದು ಹೆಚ್ಚಿಗೆ ಬೇಕಾದಷ್ಟು ಹಣ ವನ್ನೂ ಬಡ್ಡಿಯನ್ನೂ ಕೊಡುವೆನೆಂದು ಹೇಳಿದರೂ ಶಾಯಿಲಕನು ಎರಡು ಸೇರು ಮಾಂಸವೇ ತನಗೆ ಬೇಕೆಂದು ಹಟಹಿಡಿದನು. ಯಾರಾದರೂ ಕರಾರಿನ ಶಬ್ದಗಳ ಅರ್ಥವನ್ನು ಹಿಡಿದು ಹಟತೊಟ್ಟರೆ ಈತನು ಆ ಮನುಷ್ಯನ ಎರಡು ಸೇರು ಮಾಂಸವನ್ನು ತೆಗೆದುಕೊಂಡೇ ತೀರುವನು ( He will take his pound of flesh ) ಎಂಬ ಅರ್ಥದ ಮಾತು ಇಂಗ್ಲಿಷ ಜನರ ಬಳಕೆಯಲ್ಲಿ ಬಂದಿರುವುದು. ಕೊನೆಗೆ ನ್ಯಾಯವಿಚಾರಣೆಯಲ್ಲಿ—ಎರಡು ಸೇರು ಮಾಂಸ ವನ್ನು ತೆಗೆದುಕೊಳ್ಳಬಹುದು, ಆದರೆ ಒಂದು ಹನಿ ರಕ್ತವನ್ನೂ ತೆಗೆದು ಕೊಳ್ಳಕೂಡದು. ಇಲ್ಲವೆ ಕೆಳಗೆ ಬೀಳಗೊಡಕೂಡದು; ಏಕೆಂದರೆ, ಈ ಮಾತು ಕರಾರಿನಲ್ಲಿ ಇಲ್ಲ; ರಕ್ತವನ್ನು ತೆಗೆದುಕೊಂಡರೆ ಇಲ್ಲವೆ ಬೀಳಿಸಿದರೆ ಶಾಯಿಲ ಕನು ಪ್ರಾಣದಂಡನೆಗೆ ಗುರಿಯಾಗುವನು ಎಂದು ತೀರ್ಪು ಆಯಿತು.

---

## ೧೯. ಇಟಲಿಯ ರಾಣಿ.

ಸಭ್ಯತನ.

ಒಂದಾನೊಂದು ದಿವಸ ಇಟಲಿಯ ಮಾರ್ಘಾರಿಟಾರಾಣಿಯು ಆಲ್ಪ್ಸ ಪರ್ವತವನ್ನೇರಿ ಹೋಗುತ್ತಿದ್ದಳು. ಪರ್ವತದ ಮೇಲೆ ಮಳೆಯೂ, ಹಿಮ ಪಾತವೂ ಆರಂಭವಾದುವು. ಆಲ್ಪಾಯಿನ್‌ಕ್ಲಬ್ಬಿನ ಒಂದು ಸಣ್ಣ ಗುಡಿಸಲಿಗೆ ಹೋಗಿ ರಾಣಿಯೂ ಆಕೆಯ ಪರಿವಾರದವರೂ ಅಲ್ಲಿ ಇಳಿದುಕೊಂಡರು. ಪ್ರವಾಸಕ್ಕೆ ಬಂದ ನಾನಾದೇಶದ ಹಲವು ಜನರೂ ಅಲ್ಲಿ ಇಳಿದುಕೊಂಡಿದ್ದರು. ರಾಣಿ ಬಂದುದನ್ನು ನೋಡಿ ಅವರೆಲ್ಲರೂ ಎದ್ದು ಹೊರಗೆ ಹೋಗಲುದ್ಯುಕ್ತ ರಾದರು. ಆಗ ರಾಣಿಯು ಈಗಿನ ಕಷ್ಟದ ಸಮಯದಲ್ಲಿ ನೀವೆಲ್ಲರೂ ನನ್ನ ದೇಶದಲ್ಲಿ—ಈ ಚಿಕ್ಕ ಗುಡಿಸಲಿನಲ್ಲಿ—ನನ್ನ ಅತಿಥಿಗಳು; ಎಲ್ಲರಿಗೆ ಕುಳಿತು ಕೊಳ್ಳುವುದಕ್ಕೆ ಸ್ಥಳವು ಸಾಲದಾದರೂ ನಿಂತುಕೊಳ್ಳುವುದಕ್ಕಾದರೂ ಸಾಲ ಬಹುದು. ಇಲ್ಲಿಯೇ ಇದ್ದುಬಿಡಿರಿ ಎಂದು ಹೇಳಿದಳು. ದೊಡ್ಡ ದೊಡ್ಡವರೆ ನಿಸಿಕೊಂಡಂತೆ ಹೆಚ್ಚು ಹೆಚ್ಚು ಸಭ್ಯತನವುಳ್ಳವರಾಗುವುದು ಅವಶ್ಯವು. ಆದರೆ ಸಣ್ಣವರಲ್ಲಿಯೂ ಸಭ್ಯತನವಿರಬೇಕಾಗುವುದು. ಇಟಲಿಯ ಮಹಾರಾಣಿಯ ಈ ಸಭ್ಯತನದ ನಡತೆಯನ್ನು ನಾವು ನೆನಪಿನಲ್ಲಿಟ್ಟರೆ ಉಗಿಬಂಡಿಯ ಪ್ರವಾಸ ದಲ್ಲಿ ಆಗುವ ಹಲವು ಹೊಡೆದಾಟಗಳೂ ಮನಸ್ತಾಪಗಳೂ ಇಲ್ಲದಂತಾಗು

ವುವು. "ಕುಳಿತುಕೊಳ್ಳುವುದಕ್ಕೆ ಸ್ಥಳವು ಸಾಲದಾದರೂ ನಿಂತುಕೊಳ್ಳುವುದಕ್ಕಾದರೂ ಸಾಲಬಹುದು." ಎಂಬ ಮಾತನ್ನು ಆಡುವವರು ನಮ್ಮಲ್ಲಿ ವಿರಳ; ತಾನು ಹೊರಗಿರುವಾಗ ನಿಂತುಕೊಳ್ಳುವುದಕ್ಕಾದರೂ ಸ್ವಲ್ಪ ಸ್ಥಳವನ್ನು ಕೊಡಿರೆಂದು ಕೇಳಿಕೊಳ್ಳುತ್ತಿದ್ದ ಗೃಹಸ್ಥನೇ ಒಳಗೆ ಬಂದನೆಂದರೆ ಹೊರಗೆ ಬಂಡಿ ತಪ್ಪೀತೆಂದು ಅಂಜಿ ಅತ್ತಿಂದಿತ್ತ ಅಲೆದಾಡುತ್ತಿರುವ ದೀನ ಪ್ರವಾಸಿಕರಿಗೆ ಇಲ್ಲಿ ಸ್ಥಳವಿಲ್ಲವೆಂದೂ, ಸ್ಟೇಶನ್‌ಮಾಸ್ಟರನಿಗೆ ಹೊಸ ಡಬ್ಬಿಯನ್ನು ಜೋಡಿಸುವಂತೆ ಹೇಳಬಾರದೇ ಎಂದೂ ಉಪದೇಶಿಸತೊಡಗುವನು.

ದುಃಖಿತರ, ಹೆಂಗಸರ, ಮುದುಕರ, ಹುಡುಗರ ಸಲುವಾಗಿ ಸ್ವಲ್ಪ ಅಡಚಣಿಯನ್ನೂ ಸಹಿಸಲಾರದವನು ಅಸಭ್ಯನೇ ಸರಿ. ಹೆರವರ ಸಲುವಾಗಿ ಕಷ್ಟವನ್ನು ತಾಳುವವನು ಸಭ್ಯನು. ಅಪರಿಚಿತನನ್ನು ಕೂಡ ಬಂಧುಭಾವದಿಂದ ನೋಡುವವನೇ ತಿಳಿದವನು.

---

## ೨೦. ಉಪಮನ್ಯು.

ಪ್ರಾಚೀನ ಕಾಲದ ವಿದ್ಯಾರ್ಥಿ.

ಆಯೋದಧೌಮ್ಯನೆಂಬ ಋಷಿಯ ಬಳಿಯಲ್ಲಿ ಉಪಮನ್ಯು ಎಂಬ ಶಿಷ್ಯನು ಗೋವುಗಳನ್ನು ಕಾದುಕೊಂಡು ಇದ್ದನು. ಆತನು ಹಗಲು ಗೋವುಗಳನ್ನು ಕಾದು ಸಾಯಂಕಾಲ ಆಶ್ರಮಕ್ಕೆ ಬಂದು ಗುರುವಿನ ಬಳಿಯಲ್ಲಿ ಕೈಕಟ್ಟಿಕೊಂಡು ನಿಲ್ಲುವನು. ಗುರುವು ಆತನಿಗೆ ಏನನ್ನೂ ಕೊಡುತ್ತಿರಲಿಲ್ಲ. ಆದರೂ ಉಪಮನ್ಯುವು ಪುಷ್ಟನಾಗಿರುವುದನ್ನು ಕಂಡು ಗುರುವು ಒಂದು ದಿವಸ—ತಮ್ಮಾ, ನೀನು ಮೊದಲಿನಂತೆ ಪುಷ್ಟನಾಗಿ ಇರುವೆ, ಊಟ ಮಾಡುತ್ತಿರುವೆಯಾ ಎಂದು ಕೇಳಿದನು. ಶಿಷ್ಯನು——ಸ್ವಾಮೀ, ನಾನು ಸಾಯಂಕಾಲ ಭಿಕ್ಷೆಯನ್ನು ಬೇಡಿಕೊಂಡು ಬಂದು ಊಟ ಮಾಡುತ್ತಿರುವೆನು ಎಂದನು. ಅದಕ್ಕೆ ಗುರುವು——ತಮ್ಮಾ ಗುರುವು ಹೇಳಿದ ಹೊರತು ನೀನು ಭಿಕ್ಷೆ ಬೇಡಲಾಗದು; ಮತ್ತು ಭಿಕ್ಷಾನ್ನವನ್ನು ಗುರುವಿಗೆ ನಿವೇದಿಸಿದ ಹೊರತು ಶಿಷ್ಯನು ಉಣಲಾಗದು ಎಂದು ಶಾಸ್ತ್ರವಿದೆ; ಈ ನಿಯಮವನ್ನು ನೀನು ಪಾಲಿಸಬೇಕು ಎಂದು ಹೇಳಿದನು. ಶಿಷ್ಯನು ಭಿಕ್ಷಾನ್ನವನ್ನೆಲ್ಲ ಗುರುವಿಗೆ ಅರ್ಪಿಸಲಾರಂಭಿಸಿದನು. ಆದರೆ ಗುರುವು ಅದರಲ್ಲಿ ಶಿಷ್ಯನಿಗೆ ಸ್ವಲ್ಪವನ್ನೂ ಕೊಡುತ್ತಿರಲಿಲ್ಲ. ಆದರೂ ಉಪಮನ್ಯುವು ಪುಷ್ಟನಾಗಿಯೇ ಇರುವುದನ್ನು ಕಂಡು ಮತ್ತೊಂದು

ದಿವಸ ಗುರುವು ಅದರ ಕಾರಣವನ್ನು ಕೇಳಿದನು. ಆಗ ಉಪಮನ್ಯುವು ಸ್ವಾಮಿಾ, ಭಿಕ್ಷಾನ್ನವನ್ನು ತಮಗೆ ಅರ್ಪಿಸಿದ ಬಳಿಕ ಮತ್ತೊಮ್ಮೆ ಭಿಕ್ಷೆಬೇಡಿ ತಂದು ಅದನ್ನು ಉಣ್ಣುತ್ತಿರುವೆನೆಂದನು. ಆಗ ಗುರುವು—ತಮ್ಮಾ, ಇದು ತೀರ ಸಲ್ಲದ ಮಾತು. ಏಕೆಂದರೆ, ಇದರಿಂದ ಅನ್ಯರ ವೃತ್ತಿಗೆ ಅಡ್ಡ ಬಂದಂತಾಗುವುದು; ಗೃಹಸ್ಥರು ಎಷ್ಟು ಬಾರಿ ಭಿಕ್ಷೆ ನೀಡಬೇಕು? ಭಿಕ್ಷುಕರು ಒಪ್ಪೊತ್ತಿನ ಆಹಾರಕ್ಕೆ ಸಾಲುವಷ್ಟನ್ನೇ ಬೇಡಬೇಕೆಂದು ಶಾಸ್ತ್ರವುಂಟು. ಮನುಷ್ಯನು ಭಿಕ್ಷೆಯಲ್ಲಿ ಬಹಳ ಆಸಕ್ತನಾದರೆ ಬರಬರುತ್ತ ಆಶಾಪಾಶಬದ್ಧನಾಗಿ ಧರ್ಮವನ್ನು ಬಿಡುವನು ಎಂದು ಹೇಳಿದನು. ಗುರುವಿನ ಮಾತಿಗೆ ಅಂಜಿ ಉಪಮನ್ಯುವು ಎರಡನೆಯ ಬಾರಿ ಭಿಕ್ಷವೆತ್ತುವುದನ್ನು ಬಿಟ್ಟನು. ಆದರೂ ಪುಷ್ಟನಾಗಿಯೇ ಕಾಣಿಸುತ್ತಿದ್ದುದರಿಂದ ಮತ್ತೆ ಗುರುವು ಕಾರಣವನ್ನು ಕೇಳಿದನು. ಶಿಷ್ಯನು—ಸ್ವಾಮಿಾ, ಹಸಿವಾದಾಗ ಆಕಳುಗಳ ಮೊಲೆಯಲ್ಲಿ ಕರುಗಳು ಕುಡಿದುಳಿದ ಹಾಲನ್ನು ಹಿಂಡಿ ಕುಡಿಯುತ್ತಿರುವೆನು ಎಂದನು. ಗುರುವು ನನ್ನ ಒಪ್ಪಿಗೆಯಿಲ್ಲದೆ ನನ್ನ ಆಕಳ ಹಾಲನ್ನು ಕುಡಿಯುವುದು ತಕ್ಕುದಲ್ಲ ಎಂದನು. ಶಿಷ್ಯನು ಈ ರೀತಿ ಹಾಲು ಕುಡಿಯುವುದನ್ನು ಬಿಟ್ಟನು. ಆದರೂ ಸೊರಗದಿರುವ ಶಿಷ್ಯನನ್ನು ಕುರಿತು ಮತ್ತೆ ಕಾರಣವನ್ನು ಕೇಳಲು ಉಪಮನ್ಯುವು—ಸ್ವಾಮೀ, ಕರುಗಳು ಮೊಲೆಯುಣ್ಣುವಾಗ ಅವುಗಳ ಬಾಯಿಂದ ನೊರೆಯು ಹೊರಸೂಸುವುದು; ಅದರಿಂದ ಪ್ರಾಣಧಾರಣ ಮಾಡಿರುವೆನು ಎಂದನು. ಆಗ ಧೌಮ್ಯನು—ಇದೂ ಸರಿಯಲ್ಲ; ಏಕೆಂದರೆ, ಕರುಗಳು ನಿನ್ನ ಮೇಲಿನ ಪ್ರೀತಿಯಿಂದ ಹೆಚ್ಚಿಗೆ ನೊರೆಯನ್ನು ಬಿಡುವುದರಿಂದ ಅವುಗಳಿಗೆ ಕೊರತೆಯಾಗುವುದು ಎಂದನು. ಈ ನೇರೆಗೆ ಎಲ್ಲ ಬಗೆಯಿಂದಲೂ ಆಹಾರದ ಮಾರ್ಗವು ಕಟ್ಟಾಗಲು ಒಂದು ದಿವಸ ಅಡವಿಯಲ್ಲಿ ಉಪಮನ್ಯುವು ಹಸಿವೆಯಿಂದ ಬಳಲಿ ಎಕ್ಕೆಯೆಲೆಗಳನ್ನು ತಿಂದನು. ರೂಕ್ಷತೀಕ್ಷ್ಣವಾದ ಎಕ್ಕೆಯೆಲೆಗಳನ್ನು ತಿಂದುದರಿಂದ ಆತನ ಕಣ್ಣುಗಳು ಹೋದುವು. ಈ ಸ್ಥಿತಿಯಲ್ಲಿ ಅಡವಿಯಲ್ಲಿ ತಿರುಗಾಡುತ್ತಿರುವಾಗ ಒಂದು ಹಳೆಯ ಬಾವಿಯಲ್ಲಿ ಬಿದ್ದನು. ಇತ್ತ ಸಂಜೆಯಾದರೂ ಉಪಮನ್ಯುವು ಮನೆಗೆ ಬಾರದಿರಲು ಗುರುವು ಉಳಿದ ಶಿಷ್ಯರನ್ನು ಕುರಿತು—ಉಪಮನ್ಯುವು ಇನ್ನೂ ಏಕೆ ಬರಲಿಲ್ಲ? ನನಗೆ ಬಹಳ ಚಿಂತೆಯಾಗಿದೆ; ಆತನಿಗೆ ಆಹಾರದ ಎಲ್ಲ ದಾರಿಗಳನ್ನು ಕಟ್ಟು

ಮಾಡಿದೆನು, ಆದುದರಿಂದು ಆತನು ಕೋಪಗೊಂಡಿರುವಂತೆ ತೋರುತ್ತಿದೆ, ನೀವೆಲ್ಲರೂ ನನ್ನೊಡನೆ ನಡೆಯಿರಿ, ಆತನನ್ನು ಹುಡುಕಿಕೊಂಡು ಬರುವ ಎಂದನು. ಆ ಮೇರೆಗೆ ಅಡವಿಗೆ ಬಂದು ಧೌಮ್ಯನು—ವತ್ಸಾ ಉಪಮನ್ಯೂ, ಎಲ್ಲಿರುವೆ? ಬಾ ಎಂದು ಕೂಗಲಾರಂಭಿಸಿದನು. ಉಪಮನ್ಯುವು ಗುರುವಿನ ದನಿಯನ್ನಾಲಿಸಿ—ಸ್ವಾಮೀ, ಈ ಬಾವಿಯಲ್ಲಿ ಬಿದ್ದಿರುವೆನು, ಏಳಲಾರೆನು ಎಂದನು. ಗುರುವು—ನೀನು ಬಾವಿಯಲ್ಲೇಕೆ ಬಿದ್ದೆ ಎಂದು ಕೇಳಿದನು. ಉಪಮನ್ಯುವು-ಹಸಿವೆಯಿಂದ ಬಳಲಿ ಎಕ್ಕೆಯೆಲೆಗಳನ್ನು ತಿಂದು ಕುರುಡನಾಗಿ ಇಲ್ಲಿ ಬಿದ್ದಿರುವೆನು ಎಂದನು. ಗುರುವು-ಹಾಗಾದರೆ ತಮ್ಮಾ, ದೇವವೈದ್ಯರಾದ ಅಶ್ವಿನೀಕುಮಾರರನ್ನು ಸ್ತುತಿಸು; ನಿನಗೆ ಕಣ್ಣುಗಳು ಬರುವುವು ಎಂದನು. ಆತನು ಆ ಮೇರೆಗೆ ಸ್ತುತಿಸಲು ಗುರುಭಕ್ತನಾದ ಉಪಮನ್ಯುವಿನ ಸ್ತೋತ್ರಕ್ಕೆ ಮೆಚ್ಚಿ ಅಶ್ವಿನೀಕುಮಾರರು ಮೈದೋರಿ—ನಾವು ನಿನಗೆ ಮೆಚ್ಚಿದೆವು, ನಿನಗೆ ಒಂದು ಪಿಷ್ಟಕವನ್ನು ಕೊಡುವೆವು; ಅದನ್ನು ತಿನ್ನು; ಕಣ್ಣುಗಳು ಬರುವುವು ಎಂದರು. ಆಗ ಉಪಮನ್ಯುವು—ತಮ್ಮ ಹೇಳಿಕೆಯಂತೆ ನಡೆವುದು ಉಚಿತವಾಗಿದ್ದರೂ ಪಿಷ್ಟಕವನ್ನು ಗುರುವಿಗೆ ನಿವೇದಿಸದೆ ನಾನು ತಿನ್ನಲಾರೆನು ಎಂದು ಹೇಳಿದನು. ಆಗ ಅಶ್ವಿನೀಕುಮಾರರು-ಪೂರ್ವದಲ್ಲಿ ನಿನ್ನ ಗುರುವು ನಮ್ಮ ಸ್ತುತಿ ಮಾಡಿದಾಗ ಆತನಿಗೂ ಪಿಷ್ಟಕವನ್ನು ಕೊಟ್ಟಿದ್ದೆವು. ಆತನು ತನ್ನ ಗುರುವಿಗೆ ಅರ್ಪಿಸದೆ ತಿಂದಿದ್ದನು. ನೀನೂ ಹೀಗೆಯೇ ತಿನ್ನು ಎಂದರು. ಆಗ ಉಪಮನ್ಯುವು-ಪೂಜ್ಯರೇ, ತಾವು ದಯಪಾಲಿಸುವ ಪಿಷ್ಟಕವನ್ನು ಗುರುವಿಗೆ ಅರ್ಪಿಸದೆ ತಿನ್ನಲಾರೆನೆಂದು ತಮಗೆ ಖಂಡಿತವಾಗಿ ಹೇಳಿಬಿಡುವೆನು. ನನಗೆ ಕಣ್ಣುಗಳು ಬಾರದಿದ್ದರೂ ಚಿಂತೆಯಿಲ್ಲ ಎಂದು ಹೇಳಿದನು. ಆಗ ಆತನ ಗುರುಭಕ್ತಿಗೆ ಮೆಚ್ಚಿ ಅಶ್ವಿನೀಕುಮಾರರು-ನಿನ್ನ ಕಣ್ಣುಗಳು ಬರಲಿ, ನಿನಗೆ ಕಲ್ಯಾಣವಾಗಲಿ ಎಂದು ಅನುಗ್ರಹಿಸಿದರು. ಉಪಮನ್ಯುವು ಕಣ್ಣುಗಳನ್ನು ಪಡೆದು ಗುರುವಿನ ಬಳಿಗೆ ಬಂದನು. ಗುರುವು ಬಹಳ ಸಂತೋಷವುಳ್ಳವನಾಗಿ-ಮಗನೇ, ನಿನಗೆ ಎಲ್ಲವೇದಗಳೂ ಶಾಸ್ತ್ರಗಳೂ ತಿಳಿಯಲಿ, ಅಧ್ಯಾಪನಾದಿ ಕಾರ್ಯಗಳಲ್ಲಿಯೂ ನೀನು ನಿಪುಣನಾಗು ಎಂದು ಆಶೀರ್ವದಿಸಿದನು. ಗುರುವಿನ ಆಶೀರ್ವಾದದಿಂದ ಉಪಮನ್ಯುವು ಎಲ್ಲ ವಿದ್ಯೆಗಳಲ್ಲಿ ಪ್ರವೀಣನಾಗಿ ಬಹಳ ಕೀರ್ತಿಯನ್ನು ಹೊಂದಿದನು.

---

ಸಮಯನಿಷ್ಠತೆ.

## ೨೧. ಎ. ಅಡ್ಯಾಮ್ಸ್.

ಅಮೇರಿಕದ ಪ್ರಸಿದ್ಧ ರಾಜನೀತಿಜ್ಞರಾದ ಎ. ಅಡ್ಯಾಮ್ಸ್ ಎಂಬವರು ಕಾಂಗ್ರೆಸ್ಸಿಗೆ ತೀರ ಸರಿಯಾದ ವೇಳೆಗೆ ಬರುತ್ತಿದ್ದರು. ಸಭಾಗೃಹದ ಗಡಿಯಾರದಲ್ಲಿ ಗಂಟೆಯು ಬಾರಿಸುತ್ತಿರುವಾಗ ಇವರು ಸಭಾಗೃಹದಲ್ಲಿ ಕಾಲಿಡುವರು. ಒಂದು ದಿವಸ ಸಭಾಗೃಹದ ಗಡಿಯಾರದಲ್ಲಿ ಗಂಟೆಬಾರಿಸುವದು ಮುಗಿದು ಹೋಯಿತು, ಆದರೂ ಎ. ಅಡ್ಯಾಮ್ಸರು ಕಾಣಿಸಲಿಲ್ಲ. ಎಲ್ಲರೂ ಅವರ ಸಲುವಾಗಿ ಕಾದುಕೊಂಡು ಅವರು ಬರುವ ದಾರಿಯ ಕಡೆಗೇ ನೋಡುತ್ತ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಎ. ಅಡ್ಯಾಮ್ಸರು ಬಂದು ತಮ್ಮ ಆಸನದ ಕಡೆಗೆ ಹೋಗಹೋಗುತ್ತ ತಮ್ಮ ಗಡಿಯಾರದಲ್ಲಾದ ವೇಳೆಯನ್ನು ಸಭಾಗೃಹದ ಕಾಮದಾರನೊಬ್ಬನಿಗೆ ತೋರಿಸಿ ತಮ್ಮ ಸ್ಥಳದ ಮೇಲೆ ಕುಳಿತುಕೊಂಡರು. ಸಭೆಯ ಕೆಲಸವು ಮುಗಿದ ಬಳಿಕ ಆ ಕಾಮದಾರನು ಚೆನ್ನಾಗಿ ಶೋಧಮಾಡಿ ಸಭಾಗೃಹದ ಗಡಿಯಾರವೇ ಆ ದಿವಸ ಒಂದು ಮಿನಿಟು ಮುಂದೆ ಹೋಗಿರುವುದೆಂದು ಮನಗಂಡು ಆ ಮಾತನ್ನು ಸಭೆಯಲ್ಲಿ ಹೇಳಿದನು. ಗಡಿಯಾರದ ಮುಳ್ಳಿಗಿಂತ ಎ. ಅಡ್ಯಾಮ್ಸರ ಮೇಲೆ ವೇಳೆಯ ವಿಷಯದಲ್ಲಿ ಹೆಚ್ಚಿಗೆ ನಂಬಿಗೆಯನ್ನಿಡುವಂತೆ ಆಗಿದ್ದಿತು.

---

ದೇವರು ಹಣ ಕೊಡುವ ರೀತಿ.

## ೨೨. ಒಬ್ಬ ಶಿವಭಕ್ತ.

ದೇವರು ಪ್ರತ್ಯಕ್ಷವಾಗಿ ಬಂದು ಹಣಕೊಡುವುದನ್ನು ಯಾರೂ ಕಂಡಿಲ್ಲವಾದರೂ ದೇವರು ಹಣ ಕೊಟ್ಟನೆಂಬ ಮಾತನ್ನು ಎಲ್ಲರೂ ಆಡುವರು. ದೇವರು ಸ್ವಹಸ್ತದಿಂದ ಹಣಕೊಡುವುದಿಲ್ಲ; ಪರಹಸ್ತದಿಂದ ಕೊಡಿಸುವನು.

ಒಂದಾನೊಂದು ಕಾಲದಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಭೂಲೋಕಸಂಚಾರಾರ್ಥವಾಗಿ ಹೊರಟವನು ಒಂದು ದಿನ ಒಂದು ಊರ ಗಣಪತಿಯ ದೇವಾಲಯದಲ್ಲಿ ಇಳಿದುಕೊಂಡನು. ಪಾರ್ವತಿಗೆ ಆ ಊರಲ್ಲಿಯ ಒಬ್ಬ ಶಿವಭಕ್ತನ ದಾರಿದ್ರ್ಯದ ನೆನಪಾಗಲು ಆಕೆ ಕನಿಕರದಿಂದ ಪರಮೇಶ್ವರನನ್ನು ಕುರಿತು—ದೇವಾ, ನಿನ್ನ ಭಕ್ತನು ಈ ಪರಿಯ ಬಡತನದಲ್ಲಿ ತೊಳಲುತ್ತಿರುವುದು ಸರಿಯಲ್ಲ; ಈತನಲ್ಲಿ ಕೃಪಾಕಟಾಕ್ಷವನ್ನಿಡು ಎನಲು, ಶಂಕರನು

ಗಣಪತಿಯನ್ನು ಕುರಿತು—ಮಗನೇ, ಈ ನನ್ನ ಭಕ್ತನಿಗೆ ನಾಳೆ ಸಾಯಂಕಾಲದೊಳಗಾಗಿ ಐದುಸಾವಿರ ಹೊನ್ನುಗಳನ್ನು ಕೊಡು ಎಂದು ಹೇಳಿದನು. ಈ ಮಾತುಗಳನ್ನು ದೇವಾಲಯದ ಹಿಂಬದಿಯಲ್ಲಿ ನಿಂತಿದ್ದ ಒಬ್ಬ ಚಿನಿವಾಲನು ಕೇಳಿ ಇದರಲ್ಲಿ ತನಗೇನಾದರೂ ಲಾಭವನ್ನು ಮಾಡಿಕೊಳ್ಳಬೇಕೆಂದು ನೆಟ್ಟನೆ ಆ ಶಿವಭಕ್ತನ ಮನೆಗೆ ಬಂದು, 'ನಾಳೆ ನಿನಗೆ ಆಗುವ ಆದಾಯವನ್ನೆಲ್ಲ ನನಗೆ ಕೊಟ್ಟರೆ ನಿನಗೆ ಈಗಲೇ ಮೂರುಸಾವಿರ ಹೊನ್ನುಗಳನ್ನು ಕೊಡುತ್ತೇನೆ' ಎಂದು ಹೇಳಿದನು. ಮಧ್ಯಾಹ್ನದ ವರೆಗೆ ತಿರುಗಾಡಿದರೂ ಪಾವು ಜೋಳದ ಭಿಕ್ಷೆ ಬಾರದ ಆ ಶಿವಭಕ್ತನು ಇದೇನೋ ವಿಚಿತ್ರಯೋಗವು ಒದಗಿತೆಂದು ಹಿಗ್ಗಿ ಚಿನಿವಾಲನ ಮಾತಿಗೆ ತಟ್ಟನೆ ಒಪ್ಪಿಕೊಂಡನು. ಚಿನಿವಾಲನಿಂದ ಆ ಶಿವಭಕ್ತನಿಗೆ ಮೂರುಸಾವಿರ ಹೊನ್ನುಗಳು ಆಗಲೇ ದೊರೆತುವು.

ಚಿನಿವಾಲನು ಬೆಳಗಾದ ಕೂಡಲೆ ಶಿವಭಕ್ತನ ಮನೆಯ ಬಾಗಿಲಲ್ಲಿ ಕುಳಿತುಕೊಂಡು ದೇವರು ಐದುಸಾವಿರ ಹೊನ್ನುಗಳ ಆದಾಯವನ್ನು ಶಿವಭಕ್ತನಿಗೆ ಹೇಗೆ ಕೊಡುತ್ತಾನೆಂಬುದನ್ನು ಕೌತುಕದಿಂದ ನೋಡುತ್ತ ಕುಳಿತುಕೊಂಡನು. ಸಾಯಂಕಾಲವಾಗುತ್ತ ಬಂದರೂ ಶಿವಭಕ್ತನಿಗೆ ಒಂದು ಪೈ ಆದಾಯವೂ ಆಗಲಿಲ್ಲ; ಚಿನಿವಾಲನು ಎದೆಗುಂದಿದನು. ಆಗ ನಿರಾಶನಾಗಿ ಮೂರುಸಾವಿರ ಹೊನ್ನುಗಳು ವ್ಯರ್ಥವಾದುವಲ್ಲ ಎಂದು ಮನದಲ್ಲಿ ಕಳವಳಗೊಳ್ಳುತ್ತ ಗಣಪತಿಯ ಮೇಲೆ ಸಂತಾಪಗೊಂಡು ಆತನ ಆಲಯಕ್ಕೆ ಬಂದು ಸಿಟ್ಟಿನ ಭರದಲ್ಲಿ ಬಾಗಿಲನ್ನು ಕಾಲಿನಿಂದ ಒದೆದನು. ಕೂಡಲೆ ಜೀರ್ಣವಾದ ಆ ಬಾಗಿಲಿಗೆ ಕಿಂಡಿ ಬೀಳಲು ಅದರಲ್ಲಿ ಚಿನಿವಾಲನ ಕಾಲು ಹಿಂದೆ ಮುಂದೆ ಸರಿಸಲು ಬಾರದಂತೆ ಬಿಗಿಯಾಗಿ ಸಿಕ್ಕಿತು. ಅದರ ಸೆಕ್ಕೆಗಳಿಂದ ಆತನ ಕಾಲಲ್ಲಿ ದಳದಳ ರಕ್ತವು ಹರಿಯಲಾರಂಭಿಸಿತು.

ಇತ್ತ ಸಾಯಂಕಾಲವಾಗುತ್ತ ಬರಲು ಶಂಕರನು ಗಣಪತಿಯನ್ನು ಕುರಿತು—ಮಗನೇ, ಭಕ್ತನಿಗೆ ಹಣವನ್ನು ಮುಟ್ಟಿಸಿದೆಯಾ ಎಂದು ಕೇಳಿದನು. ಆಗ ಗಣೇಶನು—ಈಗ ಮೂರು ಸಾವಿರ ಹೊನ್ನುಗಳನ್ನು ಕೊಡಿಸಿದ್ದೇನೆ. ಇನ್ನೆರಡು ಸಾವಿರ ಹೊನ್ನುಗಳ ಸಲುವಾಗಿ ಒಬ್ಬ ಚಿನಿವಾಲನನ್ನು ಸೆರೆಯಲ್ಲಿರಿಸಿದ್ದೇನೆ. ಅವನು ಆ ಹಣವನ್ನು ಕೊಡಲೊಪ್ಪದಿದ್ದರೆ ಆತನ ಗತಿಯು ಒಳ್ಳೆಯದಾಗದು ಎಂದು ಹೇಳಿದನು.

ಈ ಮಾತನ್ನು ಕೇಳಿ ಚಿನಿವಾಲನು ದೇವಾ, ಗಣನಾಯಕಾ, ಗಜವದನಾ, ಈಗಲೇ ಹೋಗಿ ಆ ಎರಡುಸಾವಿರ ಹೊನ್ನುಗಳನ್ನು ಶಿವಭಕ್ತನಿಗೆ ಮುಟ್ಟಿಸಿ ಬರುವೆನು; ನನ್ನ ಕಾಲು ಹೊರಗೆ ಬರುವಂತೆ ಅನುಗ್ರಹಮಾಡು ಎಂದು ಬಹು ವಿಧವಾಗಿ ಬೇಡಿಕೊಂಡನು. ಗಣಪತಿಯು ಆತನ ಬಿಡುಗಡೆ ಮಾಡಿದನು. ಶಿವಭಕ್ತನಿಗೆ ಐದುಸಾವಿರ ಹೊನ್ನುಗಳು ಪೂರ್ತಿಯಾಗಿ ಮುಟ್ಟಿದುವು.

---

ತೋರಿಕೆಯ ನಮಾಜು

## ೨೩. ಔರಂಗಜೇಬಬಾದಶಹನೂ, ಫಕೀರ ಸರ್ಮದನೂ.

ಮುಸಲ್ಮಾನರಲ್ಲಿ ನಮಾಜು ಮಾಡದವರಿಗೆ ಶಿಕ್ಷೆಯುಂಟು. ಔರಂಗಜೇಬ ಬಾದಶಹನು ನಮಾಜು ಮಾಡದ ಮುಸಲ್ಮಾನರನ್ನು ಶಿಕ್ಷಿಸುತ್ತಿದ್ದನು. ಸರ್ಮದ್ ಎಂಬ ಫಕೀರನು ನಮಾಜು ಮಾಡುವುದಿಲ್ಲವೆಂದು ಕೇಳಿ ಆತನನ್ನು ಕರೆಸಿ-ನನ್ನೊಡನೆ ಜುಮ್ಮಾಮಸೀದಿಗೆ ನಮಾಜಿಗೆಬಾ ಎಂದು ಕರೆದೊಯ್ದನು. ಫಕೀರನು ಬಾದಶಹನ ಸಂಗಡ ಹೋದನು. ಬಾದಶಹನು ತನ್ನ ಪಕ್ಕದಲ್ಲಿಯೇ ಆತನನ್ನು ನಿಲ್ಲಿಸಿಕೊಂಡನು. ನಮಾಜಿಗೆ ಆರಂಭವಾಗುವಾಗ ಪೇಶ್‌ನಮಾಜ್ ಎಂಬವನು [ ಈತನು ಮೊದಲಿಗೆ 'ಅಲ್ಲಾ' ಎಂದು ಕೂಗುವನು. ] 'ಅಲ್ಲಾ' ಎಂದು ಕೂಗಲು ಸರ್ಮದನು—'ನಿನ್ನ ಅಲ್ಲಾ ನಿನ್ನ ಕಾಲಕೆಳಗೆ' ಎಂದು ಹೇಳಿ ಅಲ್ಲಿಂದ ಓಡಿಹೋದನು. ನಮಾಜು ಮುಗಿದ ಕೂಡಲೆ ಸಿಟ್ಟಿನಿಂದ ಎಚ್ಚರದಪ್ಪಿದ ಔರಂಗಜೇಬನು ಫಕೀರನನ್ನು ಹಿಡಿತರಿಸಿ ಇಸ್ಲಾಂ ಧರ್ಮಕ್ಕೆ ಅಪಮಾನ ಮಾಡಿದನೆಂಬ ಆರೋಪದಿಂದ ಆತನಿಗೆ ಮರಣ ಶಿಕ್ಷೆಯನ್ನು ವಿಧಿಸಿದನು. ಆಗ ಫಕೀರನು-ನಾನು ನಿಜವನ್ನೇ ನುಡಿದಿರುವೆನು; ಪೇಶ್‌ನಮಾಜನನ್ನು ಕರೆಸಿ ಕೇಳಿರಿ, ಸ್ಪಷ್ಟವಾಗುವುದು ಎಂದು ಹೇಳಿದರೂ ಕೇಳದೆ ಬಾದಶಹನು ಅಲ್ಲಿಯೇ ಆತನ ತಲೆಹೊಡೆಯಿಸಿದನು. ಅಂದಿನಿಂದ ಸಾಯುವವರೆಗೆ ಔರಂಗಜೇಬನಿಗೆ ದಿಲ್ಲಿಯ ವಾಸವು ತಪ್ಪಿತೆಂದು ಹೇಳುವರು.

ಪೇಶ್‌ನಮಾಜನು ಅದೇದಿವಸ ರಾತ್ರಿಯಲ್ಲಿ ಒಂದು ಕನಸನ್ನು ಕಂಡನು-ಹೊಳೆಹೊಳೆಯುವ ಮೈಯುಳ್ಳ ಒಬ್ಬ ದೇವದೂತನು ಹತ್ತಿರ ಬಂದು ಕರುಣಾಸ್ವರದಿಂದ—ನೀನು ನಿಜವನ್ನು ಹೇಳಿ ಸಾಧುವನ್ನು ಏಕೆ ಬದುಕಿಸಲಿಲ್ಲ? ನೀನು ಆಗ (ನಮಾಜಿನ ಆರಂಭದಲ್ಲಿ) ಬಾಯಿಂದ ಏನನ್ನು ಹೇಳುತ್ತಿದ್ದರೂ

ನಿನ್ನ ಮನಸ್ಸಿನಲ್ಲಿ ಆಗ ಇದ್ದುದು ಏನು? ಅದನ್ನೇಕೆ ಹೇಳಲಿಲ್ಲ? ನೀನು ನಿಂತ ಕಟ್ಟೆಯ ಹಾಸುಗಲ್ಲನ್ನು ಎತ್ತಿ ಏಕೆ ನೋಡಲಿಲ್ಲ? ಫಕೀರನು ಸತ್ಯವನ್ನಾಡುತ್ತಾನೋ ಇಲ್ಲವೋ ತಿಳಿದುಹೋಗುತ್ತಿತ್ತು; ಪ್ರತಿಕ್ಷಣದಲ್ಲಿ 'ಅಲ್ಲಾ ಅಲ್ಲಾ' ಎಂದು ಧ್ಯಾನಮಾಡುವ ಸಾಧುಪುರುಷನು ಮೋಸಗಾರನಿಂದ ಮರಣಶಿಕ್ಷೆಯನ್ನು ಹೊಂದಬೇಕಾಯಿತಲ್ಲವೇ? ಎಂದು ನುಡಿದಂತಾಯಿತು.

ನಿದ್ರೆಯಿಂದ ಹೊಡೆದೆಬ್ಬಿಸಿದಂತೆ ಒಮ್ಮೆಲೆ ಎದ್ದು, ಬೆಮ್ಮನೆ ಮೈ ಬೆವತ, ಡವಡವ ಎದೆ ಹಾರುತ್ತಿದ್ದ ಪೇಶ್ವನಮಾಜನು ತಟ್ಟನೆ ಹಾಸಿಗೆಯನ್ನು ಬಿಟ್ಟು ಒಂದು ಗುದ್ದಲಿಯನ್ನು ತೆಗೆದುಕೊಂಡು ನೆಟ್ಟಗೆ ಜುಮ್ಮಾಮಸೀದಿಗೆ ಹೋಗಿ ತಾನು ನಿಂತ ಕಟ್ಟೆಯ ಹಾಸುಗಲ್ಲನ್ನು ಎಬ್ಬಿಸಿದನು. ನೋಡುತ್ತಾನೆ-ಹೊನ್ನು ತುಂಬಿದ ಪಾತ್ರೆ! ಫಕೀರನು—'ನಿನ್ನ ಅಲ್ಲಾ ನಿನ್ನ ಕಾಲ ಕೆಳಗೆ' ಎಂದು ತಿರಸ್ಕರಿಸಿ ನುಡಿದುದು ಮನಸ್ಸಿಗೆ ತಾಗಿತು. ಆಗ ತಾನು ಬಾಯಿಂದ 'ಅಲ್ಲಾ' ಎಂದು ಹೇಳುತ್ತಿದ್ದರೂ ಮನಸ್ಸಿನಲ್ಲಿ ಮಗಳ ಮದುವೆಗಾಗಿ ಕೆಲವು ಹಣವು ಬೇಕಾಗಿದೆಯೆಂದು ಹಣವನ್ನೇ ಧ್ಯಾನಿಸುತ್ತಿದ್ದೆನೆಂಬುದು ಅವನ ನೆನಪಿಗೆ ಬಂದಿತು. ಅಲೌಕಿಕ ಶಕ್ತಿಯುಳ್ಳ ಶುದ್ಧಭಾವದ ಒಬ್ಬ ಸಾಧುವಿನ ಕೊಲೆಯು ತನ್ನ ದೋಷದಿಂದಲೇ ಒದಗಿತೆಂದು ಮರಮರನೆ ಮರುಗಿ ಆ ಪೇಶ್ವನಮಾಜನು ಮಸೀದೆಯಿಂದ ಮರಳಿ ಮನೆಗೆ ಹೋಗಲೇ ಇಲ್ಲ. ಎಲ್ಲವನ್ನೂ ತೊರೆದು ಬೈರಾಗಿಯಾಗಿ ದೇವರ ಧ್ಯಾನದಲ್ಲಿ ತೊಡಗಿದನು.

---

ಸತ್ಯಾಚರಣ.

## ೨೪. ಹಾಯ್ಲಂಡದ ಬಾಲಕನು.

ಇಂಗ್ಲಂಡದ ಅರಸನಾದ ೨ನೆಯ ಜೇಮ್ಸನ ಮೊಮ್ಮಗನಾದ ಪ್ರಿನ್ಸ್ ಚಾರ್ಲಸ್ ಪ್ರಿಟೆಂಡರನು ಇಂಗ್ಲಂಡದ ರಾಜನಾಗಿದ್ದ ಮೊದಲನೆಯ ಜಾರ್ಜನಿಂದ ಸೋತು ಪ್ರಾಣಭಯದಿಂದ ಸ್ಕಾಟ್ಲಂಡದ ಹಾಯ್ಲಂಡ್ ಎಂಬ ಪರ್ವತ ಪ್ರದೇಶದಲ್ಲಿ ಅಲೆದಾಡುತ್ತಿದ್ದನು. ಆಗ ಅವನ ತಲೆಯನ್ನು ತಂದವರಿಗೆ ೩೦ ಸಾವಿರಪೌಂಡು (೪॥ಲಕ್ಷರೂ.) ಇನಾಮು ದೊರೆಯುವಂತೆ ಪ್ರಕಟವಾಗಿತ್ತು. ಆಗ ಪ್ರಿಟೆಂಡರನನ್ನು ಹುಡುಕಲು ಹೊರಟ ಒಬ್ಬ ಕಪ್ತಾನನು ಹಾಯ್ಲಂಡದ ಒಬ್ಬ ಬಾಲಕನನ್ನು ಕುರಿತು-ನೀನು 'ಪ್ರಿನ್ಸ' ನನ್ನು ಕಂಡೆಯಾ ಎಂದು ಕೇಳಿದನು. ಹನ್ನೆರಡು ವರ್ಷದ ಆ ಬಾಲಕನು ಉತ್ತರ ಕೊಡುತ್ತಾನೆ—

“ನಾನು ಕಂಡೆನು; ಆದರೆ ಯಾವಾಗ ಕಂಡೆನು, ಎಲ್ಲಿ ಕಂಡೆನು, ಈಗ ಎಲ್ಲಿ ಇರ ಬಹುದು ಎಂಬುದನ್ನು ಮಾತ್ರ ನಾನು ಎಂದೂ ಹೇಳುವುದಿಲ್ಲ.” ಕಪ್ತಾನನು ಸಿಟ್ಟಾಗಿ ತನ್ನ ಒರೆಯುಂಚ್ಚಿದ ಕತ್ತಿಯಿಂದ ಬಾಲಕನಿಗೆ ಬಲವಾಗಿ ಒಂದು ಏಟನ್ನು ಹಾಕಿ ನೀನು ಕಂಡಿರುವುದನ್ನು ಹೇಳಲೇಬೇಕು; ಎಂದು ಬೆದರಿಸಿದನು. ಆ ಏಟಿನ ನೋವಿಗೆ ಹುಡುಗನು ಚೀರಿದನು. ಆದರೆ ಕೂಡಲೆ—ನಾನು ವ್ಯೆಯ್ಯ ನೋವಿನಿಂದ ಚೀರಿದೆನು; ಪ್ರಾಣಭಯದಿಂದಲ್ಲ. ನಾನು ಮೆಕ್‌ಫರ್ಸನ್ ಪಂಗಡದವನು; ಸಂಕಟದಲ್ಲಿ ಸಿಲುಕಿದ ರಾಜನನ್ನು ಶತ್ರುಗಳಕೈಗೆ ಕೊಡುವ ವಿಶ್ವಾಸಘಾತದ ಕೆಲಸವನ್ನು ಎಂದೂ ಮಾಡುವವನಲ್ಲ ಎಂದು ನುಡಿದನು. ಕಪ್ತಾನನು ಬಾಲಕನ ದಿಟ್ಟತನವನ್ನೂ ಒಗರನ್ನೂ ನೋಡಿ, ಆತನ ನಿರ್ಭ ಯದ ನುಡಿಯನ್ನು ಕೇಳಿ ಮೆಚ್ಚಿ ಆತನಿಗೆ ಒಂದು ಬೆಳ್ಳಿಯ ಕ್ರಾಸನ್ನು ಕೊಟ್ಟು ಹೊರಟು ಹೋದನು. ಈ ಕ್ರಾಸು ಈಗಲೂ ಮೆಕ್‌ಫರ್ಸನ್ ಪಂಗಡದವರಿಂದ ಅಭಿಮಾನಪೂರ್ವಕವಾಗಿ ಕಾದಿಡಲ್ಪಟ್ಟಿರುವುದು.

---

ದಾನಧರ್ಮ.

## ೨೫. ಮಹಾತ್ಮನಾದ ಇಬ್ರಾಹೀಮ್.

ಮಹಾತ್ಮನಾದ ಇಬ್ರಾಹೀಮನು ಅತಿಥಿಸತ್ಕಾರಮಾಡದೆ ಎಂದೂ ಊಟ ಮಾಡುತ್ತಿರಲಿಲ್ಲ. ಒಂದು ದಿವಸ ಅತಿಥಿಗಳು ಬಾರದಿರಲು ತಾನೇ ಒಬ್ಬ ಬಡವನನ್ನು ಕರೆತರಬೇಕೆಂದು ಹೊರಹೊರಟನು. ದಾರಿಯಲ್ಲಿ ಒಬ್ಬ ಬಡ ಮುದುಕನು ಇದಿರಿಗೆ ಬರುತ್ತಿದ್ದನು. ಆತನನ್ನು ಮನೆಗೆ ಕರೆತಂದು ಊಟಕ್ಕೆ ಕುಳ್ಳಿರಿಸಿದನು. ಅತಿಥಿಯು ಊಟಕ್ಕೆ ಕುಳಿತುಕೊಳ್ಳುವಾಗ ಈಶ್ವರೋಪಾಸನೆ ಯನ್ನು ಮಾಡದಿರಲು ಇಬ್ರಾಹೀಮನು ಅದರ ಕಾರಣವನ್ನು ಅತಿಥಿಗೆ ಕೇಳಿ ದನು. ಆಗ ಅತಿಥಿಯು—ಅಯ್ಯಾ, ನಾನು ಅಗ್ನಿಪೂಜಕನು; ನಿಮ್ಮ ಸಮಾಜದ ವನು ಇಲ್ಲವೆ ಧರ್ಮದವನು ನಾನಲ್ಲ; ಎಂದು ಹೇಳಿದನು. ಆಗ ಇಬ್ರಾಹೀ ಮನು “ಕಾಫರ್” ಎಂದು ತಿರಸ್ಕರಿಸಿ ಆ ಮುದುಕನನ್ನು ಹೊರದೂಡಿಸಿದನು. ಅನ್ನವನ್ನು ನೀಡಲಿಲ್ಲ. ಆ ದಿವಸ ಉಪಾಸನೆಯ ಕಾಲದಲ್ಲಿ ಆತನ ಮನಸ್ಸಿ ನಲ್ಲಿ ಈಶ್ವರವಾಣಿಯು ಈ ಮೇರೆಗೆ ಹೊಳೆಯಿತು—“ಎಲೈ ಇಬ್ರಾಹೀಮನೇ, ಯಾವ ಮನುಷ್ಯನನ್ನು ನಾನು ೯೦ವರ್ಷ ಅನ್ನವಸ್ತ್ರ ಕೊಟ್ಟು ಸಲಹಿರುವೆನೋ ಆ ಮನುಷ್ಯನಿಗೆ ಒಂದು ಹೊತ್ತಾದರೂ ನೀನು ಅನ್ನವನ್ನು ನೀಡದೆ ಹೋದೆ!

ಅಷ್ಟೊಂದು ತಿರಸ್ಕಾರವೇ? ಆತನು ಅಗ್ನಿಯನ್ನು ಪೂಜಿಸುತ್ತಾನೆಂಬುದು ನಿಜವು; ಆದರೇನಾಯಿತು? ನಾನು ನಿರ್ಮಿಸಿದ ಪ್ರಾಣಿಯಲ್ಲವೆ? ದಾನಕ್ಕೆ ನೀಡಿದ ಕೈಯನ್ನು ಏಕೆ ಮುದುಡಿಕೊಂಡೆ?''

ಇಬ್ರಾಹೀಮನ ಮನಸ್ಸಿನ ಸಂಕುಚಿತ ವಿಚಾರವು ಅಳಿದುಹೋಯಿತು.

ಚಟುವಟಿಕೆಯೂ
ಏಕಾಗ್ರತೆಯೂ.

## ೨೬. ಭೂತವಶೀಕರಣ.

ಒಬ್ಬ ಗೃಹಸ್ಥನು ತನ್ನ ಯಾವ ಕೆಲಸವೂ ಚೆನ್ನಾಗಿ ಆಗದಿರುವುದನ್ನು ಕಂಡು ಒಬ್ಬ ಸಾಧುವಿನ ಬಳಿಗೆ ಹೋಗಿ ಸೇವೆಯನ್ನು ಮಾಡಿಕೊಂಡಿರಲು ಆತನು ಪ್ರಸನ್ನನಾಗಿ ಒಂದು ಭೂತವನ್ನು ಆ ಗೃಹಸ್ಥನ ವಶಕ್ಕೆ ಕೊಟ್ಟು ಈ ಭೂತದಿಂದ ನಿನ್ನ ಎಲ್ಲ ಕೆಲಸಗಳು ಇನ್ನು ಚೆನ್ನಾಗಿ ನಡೆಯುವುವು, ಹೋಗು ಎಂದು ಹೇಳಿ ಕಳುಹಿದನು. ಆ ಗೃಹಸ್ಥನು ಮನೆಗೆ ಬಂದು ಆ ಭೂತದ ಸಹಾಯದಿಂದ ಎಲ್ಲ ಕೆಲಸಗಳನ್ನು ಸರಿಯಾಗಿ ಮಾಡಿಕೊಳ್ಳತೊಡಗಿದನು. ಆದರೆ ಆ ಭೂತವು—ನನ್ನನ್ನು ಕೆಲಸವಿಲ್ಲದೆ ಇರಗೊಟ್ಟರೆ ನಿನ್ನ ಕುತ್ತಿಗೆಯನ್ನೇ ಹಿಚುಕುವೆನು ಎಂದು ಅಂಜಿಸಿತು. ಗೃಹಸ್ಥನು ಮತ್ತೆ ಸಾಧುವಿನ ಬಳಿಗೆ ಬಂದು ಸ್ವಾಮಿ, ಈ ಭೂತವನ್ನಾಳುವುದು ನನ್ನಿಂದಾಗದು; ಇದಕ್ಕೆ ಸಾಕಾಗುವಷ್ಟು ಕೆಲಸವು ನನ್ನ ಬಳಿಯಲ್ಲಿಲ್ಲ. ಆದುದರಿಂದ ಇದನ್ನು ನನ್ನಿಂದ ತೊಲಗಿಸು ಎಂದು ಬೇಡಿಕೊಂಡನು. ಆಗ ಸಾಧುವು ನಕ್ಕು—ಕೆಲಸಕ್ಕೇನು ಕೊರತೆ? ನಿನ್ನ ಕೆಲಸವು ಮುಗಿದ ಬಳಿಕ ನೆರೆಹೊರೆಯವರ ಕೆಲಸವನ್ನು ಹೇಳು; ಅದೂ ಮುಗಿದ ಬಳಿಕ ಓಣಿಯ ಜನರ, ಊರ ಜನರ, ದೇಶದ ಕೆಲಸವನ್ನು ಹೇಳು. ಯಾವ ಕೆಲಸವೂ ಇಲ್ಲದಿರುವಾಗ ಏಕಾಗ್ರತೆಯಿಂದ ಕಂಬವನ್ನು ಸುತ್ತಹೇಳು ಎಂದು ಉಪದೇಶಿಸಿ ಕಳುಹಿದನು. ಆ ಗೃಹಸ್ಥನು ಆ ಮೇರೆಗೆ ಮಾಡಲು ಆತನು ಎಲ್ಲ ಕಡೆಗೆ ಪ್ರಸಿದ್ಧಿಯನ್ನು ಪಡೆದನು.

ಆ ಭೂತವು ಯಾವುದು? ಮನಸ್ಸೇ ಆ ಭೂತವು! ಮನಸ್ಸುಗೊಟ್ಟು ಮಾಡಿದ ಕೆಲಸವು ತೀವ್ರವಾಗಿಯೂ, ಚೆನ್ನಾಗಿಯೂ ಆಗುವುದು. ಆದರೆ ಮನಸ್ಸನ್ನು ಸುಮ್ಮನೆ ಇರಿಸುವುದು ಆಗದ ಮಾತು. ಅದಕ್ಕೆ ಕೆಲಸವನ್ನು ಹೇಳದಿದ್ದರೆ ಅದು ನಿಮ್ಮನ್ನು ಕೆಟ್ಟ ದಾರಿಗೆ ಒಯ್ಯುವುದು; ನಿಮ್ಮ ಹಾನಿಯನ್ನು ಮಾಡುವುದು; ಎಂದರೆ-ನಿಮ್ಮ ಕುತ್ತಿಗೆಯನ್ನು ಹಿಚುಕುವುದು. ಕೆಲಸವಿಲ್ಲದ ಬಡಗಿಯು ಏನನ್ನೋ ಕೆತ್ತಿದನಂತೆ; ನಿರುದ್ಯೋಗಿಯ ಮನವು ದೆವ್ವನ

ಕಾರಖಾನೆಯು ಎಂಬರ್ಥದ ಮಾತುಗಳು ಬಳಕೆಯಲ್ಲಿ ಬಂದಿರುವವು. ಎಷ್ಟೋ ಜನ ಕಾಮುದಾರರು ಪೆನ್‌ಶನ್ ಆದಮೇಲೆ ಸಾಕಾಗುವಷ್ಟು ಕೆಲಸ ವಿಲ್ಲದಂತಾಗುವುದರಿಂದ ನೆರೆಹೊರೆಯವರ ಸಂಗಡ ಜಗಳವಾಡುತ್ತ ಕಾಲಕಳೆ ಯುವುದನ್ನು ಕಾಣಬಹುದು. ಈ ದೇಶದಲ್ಲಿ ಎಷ್ಟೋ ಜನ ಶ್ರೀಮಂತರು ಬಡವರಂತೆ ನಾವೇಕೆ ಕೆಲಸವನ್ನು ಮಾಡಬೇಕು ಎಂದೆನ್ನುತ್ತ ನಿದ್ರೆ, ಮದ್ಯ ಪಾನ, ನಾಯಿ ಹಕ್ಕಿ ಮೊದಲಾದುವನ್ನು ಸಾಕುವುದು, ನಾಚು, ಜೂಜು ಮೊದಲಾದುವುಗಳಲ್ಲಿ ಕಾಲವನ್ನು ಹಾಕುವರು. ಎಲ್ಲರೂ ಉದ್ಯೋಗವನ್ನು ಮಾಡತೊಡಗಿದರೆ ನಮ್ಮ ದೇಶವು ಈ ಪರಿಯ ಅಧೋಗತಿಗಿಳಿಯಲಾರದು. ಕಾರ್ಯಗಳ ವೈಚಿತ್ರ್ಯವೇ—ಅಂದರೆ ಒಂದು ಕಾರ್ಯವನ್ನು ಮಾಡಿದ ಬಳಿಕ ಮತ್ತೊಂದಕ್ಕೆ ತೊಡಗುವುದೇ ವಿಶ್ರಾಂತಿಯು. ಪೂರ್ಣ ವಿಶ್ರಾಂತಿಯು ಆವಶ್ಯಕತೆಯುಂಟಾದಾಗ ಮನಸ್ಸನ್ನು ಏಕಾಗ್ರತೆಯಿಂದ ಕಂಬಕ್ಕೆ ಸುತ್ತ ಹೇಳಬೇಕು. ಅಂದರೆ ಅನನ್ಯಭಾವದಿಂದ ಜಗತ್ತಿನ ಆಧಾರಸ್ತಂಭವೆನಿಸಿದ ಪರಮೇಶ್ವರನ ಧ್ಯಾನಕ್ಕೆ ತೊಡಗಿಸಬೇಕು. ಈ ಧ್ಯಾನವೇ ಮನೋಭೂತಕ್ಕೆ ಕೆಲಸವಾಗುವುದು.

ಮನಸ್ಸಿನ ಹರಿದಾಟಗಳನ್ನು ತಡೆಯುವುದು ದುಃಸಾಧ್ಯವೆಂಬುದನ್ನು ಸರ್ಪಭೂಷಣನೆಂಬ ಕವಿ ಸರಸವಾಗಿ ವರ್ಣಿಸಿರುವನು:—

ಮನವೆಂಬ ಮರ್ಕಟನ ತಡೆಯಲಾರೆನು ದೇವ ।
ಎನಿತಿದರ ಚಪಲಚೇಷ್ಟೆಗಳ ವರ್ಣಿಸಲಿ ॥
ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವದು ।
ಗಿರಿಯ ಗುಹೆಯೊಳು ಕೂತು ತಪವ ಮಾಡುವದು ॥
ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವದು ।
ಕರಿಯ ಮೇಲಂಬಾರಿಯಲ್ಲಿ ಮೆರೆಯುವದು ॥
ಅರಿಗಳನು ಹಿಡಿದು ಹೆಡೆಮುಡಿಗಟ್ಟಿ ಹೊಸಗುವದು ।
ಸುರಲೋಕಕ್ಕೈದಿ ನಂದನದೆ ರಮಿಸುವದು ॥
ಪಿಡಿವೆನೆನೆ ಮೊದಲೆ ಮುಮ್ಮಾರು ಹಾರಾಚಿಹುದು ।
ಪೊಡೆವೆನೆನಲಾ ನುಡಿಯುದಾರದೆನ್ನುವದು ॥
ತುಡುಗ ದನವಿನ ಕೊರಳ ಗುದ್ದೆಯಂದದೊಳೆನ್ನ ।
ನೆಡೆಬಿಡದೆ ಮೂಜಗದೊಳೆಳೆದಾಡುತಿಹುದು ॥

ಬೊಕ್ಕಸದೊಳಗಿನ ಹಣವು ಪ್ರಜೆಗಳದು

## ೨೭. ಬಗದಾದದ ಖಲೀಫ.

ಬಗದಾದದ ಒಬ್ಬ ಖಲೀಫನು ತನ್ನ ಮನೆಯ ವೆಚ್ಚಕ್ಕಾಗಿ ಬೊಕ್ಕಸದಿಂದ ಪ್ರತಿದಿನ ಸಂಜೆಗೆ ಮೂರು ದೆಹರಮ್ (= ೧ ರೂಪಾಯಿ)ಗಳನ್ನು ತರಿಸಿಕೊಳ್ಳುತ್ತಿದ್ದನು. ಬೇರೆ ಕಾಮದಾರರು ಖಲೀಫನ ಅಪ್ಪಣೆಯಿಂದ ಇದಕ್ಕಿಂತ ಹೆಚ್ಚಾದ ಸಂಬಳವುಳ್ಳವರಾಗಿದ್ದರು. ಖಲೀಫನು ತನ್ನ ಹೆಂಡತಿ, ಮಕ್ಕಳು ಇವರ ಹೊಟ್ಟೆ ಬಟ್ಟೆಗಳ ಸಲುವಾಗಿ ಅವಶ್ಯವಾಗಿ ಬೇಕಾಗುವ ವೆಚ್ಚದ ಲೆಕ್ಕ ಮಾಡಿಯೇ ಈ ಹಣವನ್ನು ತರಿಸಿಕೊಳ್ಳುತ್ತಿದ್ದನು. ಒಮ್ಮೆ ಈದರ್ ಹಬ್ಬದ ದಿವಸ ಎಲ್ಲರೂ ಹೊಸ ಬಟ್ಟೆಗಳನ್ನು ಹಾಕಿಕೊಂಡು ತಿರುಗಾಡುವುದನ್ನು ಕಂಡು ಖಲೀಫನ ಸಣ್ಣ ಮಕ್ಕಳು ತಮಗೂ ಹೊಸ ಬಟ್ಟೆಗಳು ಬೇಕೆಂದು ತಾಯಿಯ ಬಳಿಯಲ್ಲಿ ಹಟಮಾಡತೊಡಗಿದುವು. ಆಗ ಖಲೀಫನ ಹೆಂಡತಿಯು ಗಂಡನನ್ನು ಕುರಿತು ತಾವು ಮೂರು ದಿನಗಳ ಹಣವನ್ನು ಮುಂಗಡ ತರಿಸಿಕೊಟ್ಟರೆ ಮೂರು ದಿನದ ಹೊಟ್ಟೆಯ ವೆಚ್ಚವನ್ನು ಸಾಗಿಸಿ ಮಕ್ಕಳಿಗೆ ಕೆಲವು ಹೊಸ ಬಟ್ಟೆಗಳನ್ನು ತರಿಸಿಕೊಡುವೆನೆಂದು ಹೇಳಿದಳು. ಆಗ ಖಲೀಫನು ಹೆಂಡತಿಗೆ—ನಾನು ಮೂರು ದಿವಸ ಬದುಕುವುದು ನಿಜವೆಂಬುದಕ್ಕೆ ಪರಮೇಶ್ವರನಿಂದ ಆಧಾರಪತ್ರವನ್ನು ತಂದು ತೋರಿಸಿದರೆ ಅದರ ಬಲದಿಂದ ಬೊಕ್ಕಸದ ಅಧಿಕಾರಿಯು ಕಡೆಗೆ ಕಳುಹುವ ೯ ದೆಹರಂಗಳ ಬಿಲ್ಲಿನ ಮೇಲೆ ಸಹಿಯನ್ನು ಮಾಡುವೆನು ಎಂದು ಹೇಳಿದನು!

ಹೆಂಡತಿಯ ಸಮಾಧಿಗಾಗಿ ತಾಜಮಹಲಿನಂತಹ ಮಂದಿರಗಳನ್ನು ಕಟ್ಟಿಸಿ ಬೊಕ್ಕಸವನ್ನು ತೆರವು ಮಾಡಿದ ಮುಸಲ್ಮಾನ ಅರಸರು ಇಂತಹ ಮಾದರಿಯನ್ನು ಮುಂದೆ ಇಟ್ಟುಕೊಳ್ಳುವುದು ಅವಶ್ಯವಾಗಿದ್ದಿತು.

---

ಸ್ವದೇಶಭಕ್ತಿ

## ೨೮. ರೇಗುಲಾಸ್.

ರೋಮಕ್ಕೂ ಅದರ ಕಡುಹಗೆಯಾದ ಕಾರ್ಥೇಜಕ್ಕೂ ಯುದ್ಧವು ನಡೆದಾಗ ಕಾರ್ಥೇಜದವರು ರೋಮದ ದಂಡಿನ ಒಂದು ಭಾಗವನ್ನು ಸೋಲಿಸಿ ಅದರ ಸೇನಾಪತಿಯಾದ ರೇಗುಲಾಸ್ ಎಂಬವನನ್ನು ಸೆರೆಹಿಡಿದರು. ಆದರೆ ಬೇರೆ ಬೇರೆ ಕಡೆಗಳಲ್ಲಿ ನಡೆದ ಕಾಳಗಗಳಲ್ಲಿ ರೋಮದವರೇ ಜಯಶೀಲರಾಗುತ್ತಲೂ, ಕಾರ್ಥೇಜದವರು ಕ್ರಮದಿಂದ ಬಲಹೀನರಾಗುತ್ತಲೂ ನಡೆದಿದ್ದರು.

ಈ ಕಾರಣದಿಂದ ಕಾರ್ಥೇಜದವರು ಒಡಂಬಡಿಕೆಯನ್ನು ಮಾಡಿಕೊಳ್ಳ ಬೇಕೆಂದು ರೋಮಕ್ಕೆ ತಮ್ಮ ರಾಯಭಾರಿಯನ್ನು ಕಳುಹಿದರು. ರಾಯ ಭಾರಿಯ ಸಂಗಡ ರೇಗುಲಾಸನನ್ನೂ ಕಳುಹಿದ್ದರು. ಒಪ್ಪಂದವು ಆಗದಿದ್ದರೆ ನಾನು ಮರಳಿ ಬರುವೆನೆಂದು ರೇಗುಲಾಸನಿಂದ ಪ್ರತಿಜ್ಞೆಮಾಡಿಸಿಕೊಂಡಿದ್ದರು. ರೋಮಕ್ಕೆ ಹೋದ ಬಳಿಕ ರೇಗುಲಾಸನ ಹೆಂಡತಿಯೂ ಮಕ್ಕಳೂ ಆತನನ್ನು ಕಾಣುವುದಕ್ಕೆ ಬರಲು ಆತನು ಅವರೊಡನೆ ಮಾತಾಡದೆ ಕೆಳಗೆ ಮೋರೆಯ ಮಾಡಿಕೊಂಡು ಕುಳಿತನು. ಹೀಗೆ ಮಾಡುವಲ್ಲಿ ಆತನ ಅಭಿಪ್ರಾಯವು—ರೋಮದ ಸ್ವತಂತ್ರಮನುಷ್ಯನ ಮರ್ಯಾದೆಯುಳ್ಳ ಹೆಂಡತಿಯನ್ನು ಹಗೆಗಳಿಗೆ ಸೋತ ಒಬ್ಬ ಸೆರೆಯಾಳು ಕಣ್ಣೆತ್ತಿ ನೋಡುವುದು ಕೂಡ ಸರಿಯಲ್ಲವೆಂಬುದಾಗಿ ಇದ್ದಿತು. ಆಗ ಆತನು ಸೆನೆಟ್ ಸಭೆಗೆ ಹೋಗಿ—ನಾನು ಈಗ ಕಾರ್ಥೇಜದವರ ದಾಸನಾಗಿರುವೆನು; ಅಲ್ಲಿಯ ಮಂತ್ರಿಗಳ ಅಪ್ಪಣೆಯ ಮೇರೆಗೆ ಕಾರ್ಥೇಜದ ರಾಯಭಾರಿಯ ಸಂಗಡ ಒಪ್ಪಂದಕ್ಕಾಗಿ ಬಂದಿರುವೆನು; ಎಂದು ಹೇಳಿದನು. ಆಗ ಕಾರ್ಥೇಜದ ರಾಯಭಾರಿಯು-ಒಪ್ಪಂದವಾಗುವುದರಲ್ಲಿ ಎರಡೂ ಬಣಗಳಿಗೂ ಹಿತವುಂಟು; ಆದುದರಿಂದ ಒಪ್ಪಂದದ ವಿಷಯದಲ್ಲಿ ನಿಮ್ಮ ಸ್ವಂತದ ಅಭಿಪ್ರಾಯವನ್ನು ಸಭೆಗೆ ನಿವೇದಿಸಬಹುದು; ಎಂದು ರೇಗುಲಾಸನಿಗೆ ಸೂಚಿಸಿದನು. ತಾನು ಸೆರೆಯಲ್ಲಿರುವುದರಿಂದ ಒಪ್ಪಂದವಾದರೆ ತನ್ನ ಬಿಡುಗಡೆಯಾಗುವುದೆಂದು, ಒಪ್ಪಂದವಾಗಬೇಕೆಂಬ ಅಭಿಪ್ರಾಯವನ್ನೇ ಹೇಳುವನೆಂದು ಆ ರಾಯಭಾರಿಯು ಭಾವಿಸಿದ್ದನು. ಆದರೆ ರೇಗುಲಾಸನು-ಈವರೆಗೆ ಬಹು ಜನಧನಗಳನ್ನು ಕಳೆದುಕೊಂಡು ರೋಮವು ಈಗ ಪಡೆದ ಸುಸ್ಥಿತಿಯ ಲಾಭವನ್ನು ಮಾಡಿಕೊಳ್ಳದೆ, ಒಪ್ಪಂದವನ್ನು ಮಾಡಿಕೊಂಡುಬಿಟ್ಟರೆ ಹಗೆಗಳು ಮತ್ತೆ ಬಲಿಷ್ಠರಾಗುವರು; ಅದರಿಂದ ಮತ್ತೆ ರೋಮಕ್ಕೆ ಹಾನಿಯೇ ಉಂಟು. ನಮ್ಮ ದಂಡಾಳುಗಳಲ್ಲಿ ಕೆಲವರು ಸೆರೆಯಲ್ಲಿರುವರೆಂದು ಅವರ ಸಲುವಾಗಿ ದೇಶದ ಹಿತವನ್ನು ನೋಡದಿರುವುದು ಸರಿಯಲ್ಲ; ಯುದ್ಧವು ಸಾಗಲಿ, ಅದರಿಂದಲೇ ರೋಮದ ಕಲ್ಯಾಣವಾದೀತು; ಸೆರೆಯಾಳುಗಳಾಗಿ ಸಿಕ್ಕಿರುವ ನಮ್ಮನ್ನು ಸೆನೆಟ್ ಸಭೆಯವರು ಸತ್ತವರಲ್ಲಿ ಎಣಿಸಬೇಕು ಎಂದು ಹೇಳಿದನು. ದೇಶಭಕ್ತನಾದ ಆ ಮಹಾಪುರುಷನ ಅಭಿಪ್ರಾಯದಂತೆ ಒಪ್ಪಂದವು ನಿಂತು ಹೋಯಿತು; ಮತ್ತು ರೇಗುಲಾಸನು ಯಾರು ಹೇಳಿದರೂ

ಕೇಳದೆ ತನ್ನ ಪ್ರತಿಜ್ಞೆಯಂತೆ ಕಾರ್ಥೇಜಕ್ಕೆ ಹೊರಟನು. ಆಗ ಆತನು–ರೋಮುದವನೆಂಬ ಹೆಸರಿಗೆ ಕಲಂಕವು ಹತ್ತುವಂತೆ ಸತ್ಯಭ್ರಷ್ಟನಾಗುವುದನ್ನು ನನಗೆ ಹೇಳಬೇಡಿರಿ; ನಾನು ಸತ್ಯಭ್ರಷ್ಟನಾದರೆ ಅಷ್ಟರಿಂದಲೇ ಶತ್ರುಗಳ ಮೋರೆ ಸ್ವಲ್ಪ ಕಳೆಯೇರಬಹುದೆಂಬುದನ್ನು ನಿಮಗೆ ಹೇಳಬೇಕಾಗಿಲ್ಲ, ಎಂದು ನುಡಿದು ರೋಮುದ ಆಬಾಲವೃದ್ಧರು ಕಣ್ಣೀರಿಡುತ್ತ ತನ್ನನ್ನು ನೋಡುತ್ತಿರುವುದನ್ನು ಲಕ್ಷಿಸದೆ ಆ ಮಹಾತ್ಮನು ಕಾರ್ಥೇಜಕ್ಕೆ ಮರಳಿ ಹೋದನು. ಕೊನೆಗೆ ಕಾರ್ಥೇಜದವರು ರೇಗುಲಾಸನನ್ನು, ಒಳಗೆ ಉಕ್ಕಿನ ಮೊಳೆಗಳನ್ನು ಜೋಡಿಸಿದ ಒಂದು ಪಿಪಾಯಿಯಲ್ಲಿ ಹಾಕಿ ಆ ಪಿಪಾಯಿಯನ್ನು ಉರುಳಿಸುವುದು ಮೊದಲಾದ ಹಲವು ಯಮಯಾತನೆಗಳಿಂದ ಕೊಲ್ಲಿಸಿದರೆಂದು ಹೇಳುತ್ತಾರೆ. ಕಡೆಗೆ ಕಾರ್ಥೇಜದವರು ರೋಮಕ್ಕೆ ಸೋತು ಬಹಳ ಹೀನತನದಿಂದ ತಾವೇ ಒಪ್ಪಂದವನ್ನು ಮಾಡಿಕೊಂಡರು.

---

ಪ್ರಾಚೀನ ಕಾಲದ ಋಷಿಪತ್ನಿ.

## ೨೯. ದೇವಹೂತಿ.

ಪ್ರಾಚೀನಕಾಲದಲ್ಲಿ ಕರ್ದಮನೆಂಬ ಋಷಿಯು ತನಗೆ ಧರ್ಮಪತ್ನಿಯೂ ಆ ಧರ್ಮಪತ್ನಿಯ ಹೊಟ್ಟೆಯಲ್ಲಿ ಸುಪುತ್ರನೂ ಆಗಬೇಕೆಂದು ತಪಸ್ಸನ್ನುಮಾಡಿದನು. ಮತ್ತು ಋಷಿಯು ಆಯುಷ್ಯದಲ್ಲಿ ತನ್ನ ಎಲ್ಲ ಕರ್ತವ್ಯಗಳನ್ನು ಸರಿಯಾಗಿ ಜರುಗಿಸುವ ಅನುಕೂಲತೆಯು ಒದಗಬೇಕೆಂದು ಪರಮೇಶ್ವರನನ್ನು ಬೇಡಿಕೊಳ್ಳುತ್ತಿದ್ದನು. ಶ್ರೀಮಹಾವಿಷ್ಣುವು ಆತನಿಗೆ ಪ್ರಸನ್ನನಾಗಿ ನಿನಗೆ ಅನುರೂಪಳಾದ ಸುಶೀಲಪತ್ನಿ ದೊರೆಯುವಳೆಂದೂ, ಅವಳಲ್ಲಿ, ನಿನಗೆ ನನ್ನ ಅಂಶದಿಂದ ಒಬ್ಬ ಮಗನು ಜನಿಸುವನೆಂದೂ ವರವನ್ನಿತ್ತನು. ಈ ಕರ್ದಮ ಮುನಿಯ ಕೀರ್ತಿಯನ್ನು ಕೇಳಿ ಮನುರಾಜಋಷಿಯ ಮಗಳು ದೇವಹೂತಿಯು ಆತನನ್ನು ಮದುವೆಯಾಗಲೆಳಸಿದಳು. ಆಗ ಮನುವು ಮಗಳನ್ನು ಸಂಗಡ ಕರೆದುಕೊಂಡು ಕರ್ದಮಮುನಿಯ ಆಶ್ರಮಕ್ಕೆ ಬಂದನು. ಕರ್ದಮನು ಅವರು ಬಂದ ಕಾರಣವನ್ನು ಅರಿತು ಸಂತೋಷದಿಂದ ದೇವಹೂತಿಯ ಪಾಣಿಗ್ರಹಣಮಾಡಿದನು. ಐಶ್ವರ್ಯವಂತನಾದ ಮನುವು ಮಗಳಿಗೆ ಅಮೌಲ್ಯವಾದ ಹಲವು ವಸ್ತ್ರಗಳನ್ನೂ ಅಲಂಕಾರಗಳನ್ನೂ ಬಳುವಳಿಯಾಗಿ ಕೊಟ್ಟು ಹೊರಟುಹೋದನು. ಇತ್ತ ದೇವಹೂತಿಯು ತಂದೆ ಹೋದಕೂಡಲೆ

ಆ ಎಲ್ಲ ವಸ್ತ್ರಾಭರಣಗಳನ್ನು ಬಡವರಿಗೆ ದಾನಮಾಡಿ ತಾನು ಪತಿಯಂತೆ ನಾರುಮುಡಿಗಳನ್ನುಟ್ಟುಕೊಂಡಳು. ಮತ್ತು ಒಮ್ಮನಸ್ಸಿನಿಂದ ಯಾವಾಗಲೂ ಪತಿಸೇವೆಯಲ್ಲಿ ತೊಡಗಿದಳು. ಮಡದಿ ಬ್ರಹ್ಮಚಾರಿಣಿಯಾಗಿ ಹಲವು ಕಾಲ ಮಾಡಿದ ಸೇವೆಗೆ ಕರ್ದಮಮುನಿಯು ಮೆಚ್ಚಿ, ಪತಿಕುಲದ ಉದ್ಧಾರಕ್ಕಾಗಿ ಸುಪುತ್ರನನ್ನು ಹಡೆಯಬೇಕೆಂದಿರುವ ಆಕೆಯ ಅಭಿಲಾಷೆಯನ್ನು ಅಂತ ರ್ಜ್ಞಾನದಿಂದರಿತು ಆಕೆಯಲ್ಲಿ ಒಬ್ಬ ಮಗನನ್ನು ಹಡೆದನು. ಆ ಮಗನು ಆ ದಂಪತಿಗಳ ಬಯಕೆಯಂತೆಯೇ ಇದ್ದನು. ಈ ಮಗನೇ ಭಗವಂತನಾದ ಕಪಿಲಮುನಿ. ಮಗನು ಹುಟ್ಟಿದ ಕೆಲವು ದಿವಸಗಳ ತರುವಾಯ ಕರ್ದಮ ಮುನಿಯು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಅರಣ್ಯಕ್ಕೆ ತೆರಳಿದನು. ದೇವಹೂತಿಯು ಸಂಗಡ ಬರುವೆನೆಂದು ಬೇಡಿಕೊಂಡಳು. ಆದರೆ ಕರ್ದಮನು ಆಕೆಗೆ ಮಗನನ್ನು ಸಲಹುವ ಭಾರವನ್ನೊಪ್ಪಿಸಿ—ಈ ಮಗನೇ ಮುಂದೆ ನಿನಗೆ ಧರ್ಮೋಪದೇಶಮಾಡುವನು; ಎಂದು ಹೇಳಿ ತಾನೊಬ್ಬನೇ ಹೊರಟು ಹೋದನು. ಮುಂದೆ ಕಪಿಲಮುನಿಯು ತಾಯಿಯನ್ನು ಕುರಿತು ಮಾಡಿದ ಮೋಕ್ಷ ಧರ್ಮೋಪದೇಶವೇ ಸಾಂಖ್ಯದರ್ಶನವೆನಿಸಿಕೊಳ್ಳುವುದು. ಆ ಉಪ ದೇಶದಿಂದ ದೇವಹೂತಿ ಮೋಕ್ಷವನ್ನೈದಿದಳು.

---

## ೩೦. ಆರಿಸ್ಟಾಯಿಡಿಸ್.

ಮಹತ್ವ.

ಅಥೆನ್ಸದ ಪ್ರಜಾಸತ್ತಾತ್ಮಕ ರಾಜ್ಯದಲ್ಲಿ ಯಾವನೊಬ್ಬನು ಅತ್ಯಂತ ಲೋಕ ಪ್ರಿಯನಾದರೆ ಅವನನ್ನು ಗಡಿದಾಟಿಸುವುದಕ್ಕಾಗಿ ಬೇಕಾದವನು ಪ್ರಜಾ ಪ್ರತಿನಿಧಿಸಭೆಗೆ ಅರ್ಜಿಯನ್ನು ಕೊಡಬಹುದೆಂದು ಕಾಯದೆಯಿತ್ತು. ಈ ಕಾಯದೆಯ ಉದ್ದೇಶವೇನೆಂದರೆ, ರಾಜ್ಯದಲ್ಲಿ ಯಾವ ಮನುಷ್ಯನೂ ಬಹಳ ಬಲಿಷ್ಠನಾಗಬಾರದು; ಹಾಗೆ ಬಲಿಷ್ಠನಾದಲ್ಲಿ ಆತನು ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯ ಉತ್ಕ್ರಾಂತಿಯನ್ನು ಮಾಡಿ ತಾನೇ ರಾಜ್ಯಸೂತ್ರಗಳನ್ನು ವಹಿಸಿ ಅರಸನಾಗಬಹುದು. ಮಹಾತ್ಮನಾದ ಆರಿಸ್ಟಾಯಿಡಿಸನು ರಾಜಸತ್ತೆಯನ್ನು ಸ್ವಪ್ನದಲ್ಲಿಯೂ ಆಶಿಸಿದವನಲ್ಲ. ಆದರೆ ತನ್ನ ಸದ್ಗುಣಗಳಿಂದಲೂ, ರಾಜ್ಯಕ್ಕೆ ಮಾಡಿದ ಉಪಕಾರಗಳಿಂದಲೂ, ಸತತೋದ್ಯೋಗದಿಂದಲೂ, ಎಲ್ಲರಿಗೂ ಪ್ರಿಯನಾಗಿದ್ದನು. ಒಂದಾನೊಂದು ದಿವಸ ಒಬ್ಬ ನಿರಕ್ಷರನಾದ ಕೂಲಿಕಾ

ರನು ಆರಿಸ್ಟಾಯಿಡಿಸನ ಪರಿಚಯವಿಲ್ಲದ್ದರಿಂದ ದಾರಿಯಲ್ಲಿ ಹೋಗುತ್ತಿದ್ದ ಆತನ ಬಳಿಗೆಯೇ ಬಂದು—ಅಯ್ಯಾ, ನನಗೆ ಬರೆವಣಿಗೆ ಬರುವುದಿಲ್ಲ; ನಾನು ಆರಿಸ್ಟಾಯಿಡಿಸನನ್ನು ಗಡಿದಾಟಿಸುವುದಕ್ಕಾಗಿ ಅರ್ಜಿಯನ್ನು ಕೊಡಬೇಕೆಂದು ನಿಶ್ಚಯಿಸಿದ್ದೇನೆ. ದಯಮಾಡಿ ಅರ್ಜಿಯನ್ನು ಬರೆದುಕೊಡಬೇಕು ಎಂದು ಕೇಳಿದನು. ಆಗ ಆರಿಸ್ಟಾಯಿಡಿಸನು ಆತನನ್ನು ಕುರಿತು—ನಿನಗೆ ಆರಿಸ್ಟಾಯಿಡಿಸನ ಗುರುತು ಉಂಟೇ? ಆತನು ನಿನಗೆ ಕೇಡನ್ನೇನಾದರೂ ಮಾಡಿರುವನೇ ಎಂದು ಕೇಳಿದನು. ಕೂಲಿಕಾರನು—ಅಯ್ಯಾ, ನಾನು ಆತನನ್ನು ಎಂದೂ ನೋಡಿಲ್ಲ; ಆತನು ಯಾರಿಗೂ ಕೇಡನ್ನು ಮಾಡುವನಲ್ಲವೆಂಬುದೂ ನಿಜವು; ಇದಲ್ಲದೆ ಆತನು ಕೂಲಿಕಾರರಿಗೆ ಅನುಕೂಲವಾದ ಒಂದು ಕಾಯದೆಯನ್ನು ಮಾಡಿಸಿರುವನೆಂದೂ ಕೇಳಿರುವೆನು. ಆದರೆ ಹೋದಲ್ಲಿ ಬಂದಲ್ಲಿ ಆರಿಸ್ಟಾಯಿಡಿಸನ ಸತ್ಯನಿಷ್ಠೆ, ನ್ಯಾಯಪಕ್ಷಪಾತ ಮೊದಲಾದ ಸದ್ಗುಣಗಳ ಸ್ತುತಿಯನ್ನು ಕೇಳಿ ಕೇಳಿ ನನಗೆ ತಲೆಶೂಲಿ ಎದ್ದಿದೆ. ಆದುದರಿಂದ ನಾನು ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಸಂರಕ್ಷಣಕ್ಕಾಗಿ ಆ ಗೃಹಸ್ಥನನ್ನು ತೀವ್ರ ಗಡಿದಾಟಿಸುವ ವ್ಯವಸ್ಥೆ ಮಾಡಬೇಕೆಂದು ನಿರ್ಣಯಿಸಿದ್ದೇನೆ ಎಂದು ಹೇಳಿದನು. ಮಹಾತ್ಮನಾದ ಆರಿಸ್ಟಾಯಿಡಿಸನು ತನ್ನ ಕೈಯಿಂದಲೆ ಆ ಅರ್ಜಿಯನ್ನು ಬರೆದು ಕೊಟ್ಟನು; ಮತ್ತು ಆ ಕಾಲದಲ್ಲಿ ಪ್ರಚಲಿತವಾದ ಆ ವಿಲಕ್ಷಣವಾದ ಕಾಯದೆಯ ಮೇರೆಗೆ ಗಡಿದಾಟಿಸಲ್ಪಟ್ಟನು.

---

ವೈರಾಗ್ಯ.

## ೩೧. ಬಲೆಗಾರನು.

ಒಂದು ದೇಶದಲ್ಲಿ ಒಬ್ಬ ಅರಸನಿದ್ದನು. ಒಂದು ದಿವಸ ಅವನು ಒಬ್ಬ ಮೀನಬಲೆಗಾರನಿಗೆ ಊಟದ ಹೊತ್ತಿನೊಳಗಾಗಿ ಮೀನಗಳನ್ನು ಹಿಡಿದುಕೊಂಡು ತರಲು ಅಪ್ಪಣೆ ಮಾಡಿದನು. ಆ ದಿವಸ ಬಲೆಗಾರನ ಬಲೆಯಲ್ಲಿ ಒಂದೂ ಮೀನವು ಬೀಳಲಿಲ್ಲ. ಇತ್ತ ಬಲೆಗಾರನು ವೇಳೆಗೆ ಬಾರದಿರಲು ಅರಸನು ಸಿಟ್ಟಾಗಿ ಆತನನ್ನು ಹಿಡಿದುಕೊಂಡು ಬರಬೇಕೆಂದು ಸಿಪಾಯಿಗಳಿಗೆ ಅಪ್ಪಣೆಮಾಡಿದನು, ಇತ್ತ ಬಲೆಗಾರನು ಮಧ್ಯಾಹ್ನವಾದರೂ ಮೀನವೊಂದೂ ಬಲೆಯಲ್ಲಿ ಸಿಕ್ಕದಿರಲು ಅರಸನ ಶಾಸನಕ್ಕೆ ಅಂಜಿ ತನ್ನ ಡೋಣಿಯನ್ನು ದಾಡೆಗೆ ಹತ್ತಿಸಿ ಹತ್ತರದಲ್ಲಿದ್ದ ಅಡವಿಯಲ್ಲಿ ಒಂದು ಗಿಡದಡಿಯಲ್ಲಿ ಹೋಗಿ ಧ್ಯಾನದಲ್ಲಿರುವಂತೆ ಕಣ್ಣುಮುಚ್ಚಿ ಕುಳಿತುಕೊಂಡನು.

ಸಾಧುಗಳನ್ನು ಜನರು ಪೀಡಿಸುವುದಿಲ್ಲವೆಂಬುದನ್ನು ಆತನು ಕೇಳಿದ್ದನು. ಡೋಣಿಯಿಂದ ಇಳಿದು ಬರುವಾಗ ತಂಬಾಕಸೇದಿದ ಬೂದಿಯನ್ನು ಹಣೆಗೆ ಬಳಿದುಕೊಂಡು ದೋತರವನ್ನು ಹರಿದು ಕೌಪೀನ ಮಾಡಿ ಹಾಕಿಕೊಂಡು ಬಂದಿದ್ದನು. ಆದರಿಂದ ಅವನು ನಿಜವಾಗಿ ಸಾಧುವಿನಂತೆ ಕಾಣಿಸುತ್ತಿದ್ದನು. ಆತನನ್ನು ಹಿಡಿದೊಯ್ಯಲಿಕ್ಕೆ ಬಂದ ಸಿಪಾಯಿಗಳು ಅತ್ತಿತ್ತ ಹುಡುಕತೊಡಗಿದರು. ಬಲೆಗಾರನು ಎಲ್ಲಿಯೂ ಕಾಣಿಸಲಿಲ್ಲ. ಸಮೀಪದಲ್ಲಿ ಬರಿಯ ಡೋಣಿ ಮಾತ್ರ ತೇಲಿ ಬರುತ್ತಿತ್ತು. ಆಗ ಸಿಪಾಯಿಗಳು ಬಲೆಗಾರನು ನೀರಲ್ಲಿ ಮುಳುಗಿದನೆಂದು ನಿಶ್ಚಯಿಸಿದರು. ದಂಡೆಯ ಸಮೀಪದಲ್ಲಿ ಸಾಧು ವೇಷದ ಬಲೆಗಾರನನ್ನು ಕಂಡು ಒಬ್ಬ ಯೋಗಿ ಬಂದಿರುವನೆಂಬ ಸುದ್ದಿಯನ್ನು ಅರಸನಿಗೆ ತಿಳುಹಿದರು. ಆತ್ಮಸಂಯಮಿಗಳಾದ ಸಾಧುಗಳಲ್ಲಿ ಭಕ್ತಿಯುಳ್ಳವನಾದ ಅರಸನು ಹೊಸಸಾಧುವಿನ ದರ್ಶನಕ್ಕಾಗಿ ಹೂ, ಹಣ್ಣು, ಹಾಲು ಮೊದಲಾದ ಪೂಜಾಸಾಹಿತ್ಯಗಳನ್ನು ಹೊರಿಸಿಕೊಂಡು ಬಂದನು. ಬಲೆಗಾರನು ಅರಸನ ಅಂಜಿಕೆಯಿಂದ ಕಣ್ಣನ್ನು ತೆರೆಯದೆ ನಿಶ್ಚಲನಾಗಿ ಕುಳಿತಿದ್ದನು. ಅರಸನೂ ಅವನ ಸಂಗಡ ಬಂದವರೂ ಹೊರಟುಹೋದ ಬಳಿಕ ಎಲ್ಲ ಸದ್ದು ಇಲ್ಲದಂತಾಗಲು ಬಲೆಗಾರನು ಕಣ್ಣು ತೆರೆದು ತನ್ನೊಳಗೆ—'ಬಲೆಗಾರನು ಡೋಣಿಯನ್ನು ತೊರೆದು ಕೌಪೀನಧಾರಿಯಾಗಿ ಅಲ್ಪಕಾಲ ಪರಮೇಶ್ವರನ ಚಿಂತನೆಮಾಡಲು ಆತನಿಗೆ ಅರಸನು ತಲೆವಾಗಿ ಫಲ-ಪುಷ್ಪಗಳನ್ನು ಅರ್ಪಿಸಿ ಪೂಜೆಮಾಡುತ್ತಾನಲ್ಲವೆ?' ಎಂದು ವಿಚಾರ ಮಾಡಿ ಆ ಬಳಿಕ ಕೌಪೀನವನ್ನು ಬಿಡುವ ಮನಸ್ಸು ಮಾಡಲಿಲ್ಲ. ಬೈರಾಗಿಯಾದನು. ಜನ್ಮಾಂತರಸಂಸ್ಕಾರಬಲದಿಂದ ಆತನು ಹಾಗೆಯೇ ಸಾಧನ ಮಾರ್ಗದಲ್ಲಿ ಉನ್ನತಿಯನ್ನು ಪಡೆದನು.

---

ಮಹತ್ವ.

## ೩೨. ವಿಕ್ಟೋರಿಯಾ ಮಹಾರಾಣಿ.

ಒಂದಾನೊಂದು ದಿವಸ ವಿಕ್ಟೋರಿಯಾ ಮಹಾರಾಣಿಯವರು ರಥದಲ್ಲಿ ಕುಳಿತುಕೊಂಡು ತಿರುಗಾಡಿ ಬರುವುದಕ್ಕೆ ಹೊರಟಿದ್ದರು. ಅವರ ರಥದ ಹಿಂದೆಯೂ ಮುಂದೆಯೂ ಕೆಲವು ಜನ ಅಂಗರಕ್ಷಕ ಸವಾರರು ಕುದುರೆಗಳನ್ನೋಡಿಸುತ್ತ ನಡೆದಿದ್ದರು. ಈ ಸಮಯದಲ್ಲಿ ಇವರ ಮುಂದುಗಡೆಯಲ್ಲಿ ಒಂದು ಸಣ್ಣ ಕಫೀನ (ಹೆಣದ ಸಿದಿಗೆ) ನ್ನು ಕೈಯಲ್ಲಿ ಹಿಡಿದುಕೊಂಡು

ಒಬ್ಬ ಬಡವನು ತನ್ನ ಹೆಂಡತಿ ಮಗಳು ಇವರನ್ನು ಸಂಗಡ ಕರೆದುಕೊಂಡು
ಶಿಶುವಿನ ಅಂತ್ಯಸಂಸ್ಕಾರಕ್ಕಾಗಿ ಸ್ಮಶಾನಕ್ಕೆ ನಡೆದಿದ್ದನು. ಮುಂದೆ ನಡೆದಿದ್ದ
ಈ ಸ್ಮಶಾನಯಾತ್ರೆಯನ್ನು ಕಂಡು ಮಹಾರಾಣಿಯವರು ಆ ಜನರ ಬದಿಯಿಂದ
ರಥವನ್ನು ಹೊಡೆದುಕೊಂಡು ಮುಂದೆ ಹೋಗುವುದಕ್ಕೆ ಒಪ್ಪಲಿಲ್ಲ; ಆ
ಜನರು ರಾಜಮಾರ್ಗವನ್ನು ಹಿಡಿದು ಹೋಗುವ ವರೆಗೆ ಗಾಡಿಯನ್ನು ಅವರ
ಹಿಂದೆ ಮೆಲ್ಲನೆ ನಡೆಸಬೇಕೆಂದು ಸಾರಥಿಗೆ ಅಪ್ಪಣೆಮಾಡಿದರು. ರಾಜಮಾರ್ಗ
ವನ್ನು ಬಿಟ್ಟು ಆ ಜನರು ಸ್ಮಶಾನದ ದಾರಿಗೆ ಹೊರಳಿದ ಬಳಿಕ ಮಹಾರಾಣಿ
ಯವರ ರಥವು ಮೊದಲಿನಂತೆ ವೇಗದಿಂದ ಹೊರಟಿತು. ಮಹಾರಾಣಿಯವರ
ಈ ಸೌಜನ್ಯವನ್ನು ನೋಡಿದವರೆಲ್ಲ ಬಹಳ ಸಂತೋಷಬಟ್ಟರು. ವಿಕ್ಟೋರಿಯಾ
ಮಹಾರಾಣಿಯವರು ಪ್ರಜೆಗಳ ವಿಷಯದಲ್ಲಿ ಈ ಮೇರೆಗೆ ಸಹಾನುಭೂತಿ
ಯುಳ್ಳವರಾದುದರಿಂದಲೇ ಪ್ರಜೆಗಳು ಅವರ ವಿಷಯದಲ್ಲಿ ಅತ್ಯಂತ ಗೌರವ
ವುಳ್ಳವರಾಗಿದ್ದರು.

---

ಹಣೆಬರಹವು ತಪ್ಪಬಹುದು.

## ೩೩. ಫಕೀರ.

ಒಬ್ಬ ಕುಂಬಾರನಿಗೆ ಮಕ್ಕಳಾಗಿರಲಿಲ್ಲ. ಆತನು ಯಹೂದಿ ಧರ್ಮದ
ವನು. ಆತನೂ ಆತನ ಹೆಂಡತಿಯೂ ಪರಮೇಶ್ವರನಲ್ಲಿ ಭಕ್ತಿಯುಳ್ಳವರು
ಅವರು ಹಜರತ್ ಮೂಸಾ ಎಂಬ ಪೈಗಂಬರನನ್ನು ಕುರಿತು ತಮಗೆ
ಮಕ್ಕಳಾಗುವರೋ ಇಲ್ಲವೋ ಹೇಳೆಂದು ಬೇಡಿಕೊಳ್ಳಲಾರಂಭಿಸಿದರು
ಪೈಗಂಬರನು ದೇವರ ಸಾಕ್ಷಾತ್ಕಾರವಾದಾಗ—'ಕರ್ಮಾನುಸಾರವಾಗಿ
ಅವರಿಗೆ ಮಕ್ಕಳಾಗುವದಿಲ್ಲ' ವೆಂದು ಉತ್ತರಪಡೆದು ಈ ಮಾತನ್ನು ಆ
ಕುಂಬಾರನಿಗೆ ಹೇಳಿದ್ದನು. ಅದರಿಂದ ಆ ಗಂಡಹೆಂಡಿರು ಉದಾಸೀನರಾಗಿ
ಸತ್ಕರ್ಮದಲ್ಲಿ ಕಾಲಕಳೆಯುತ್ತಿದ್ದರು.

ಒಂದಾನೊಂದು ದಿವಸ ಒಬ್ಬ ದಿಗಂಬರನಾದ ಫಕೀರನು ಕುಂಬಾರರ
ಬೀದಿಯಲ್ಲಿ—"ಯಾರು ನನಗೆ ಎಷ್ಟು ರೊಟ್ಟಿಗಳನ್ನು ನೀಡುವರೋ ಅವರು
ಅಷ್ಟು ಮಕ್ಕಳನ್ನು ಪಡೆಯುವರು." ಎಂದು ಕೂಗುತ್ತ ನಡೆದಿದ್ದನು
ಆ ಮಾತನ್ನು ಆ ಕುಂಬಾರನ ಹೆಂಡತಿ ಕೇಳಿ ಕೆಲವು ರೊಟ್ಟಿಗಳನ್ನು ತೆಗೆದು
ಕೊಂಡು ಅತ್ತ ಹೊರಟಳು. ಅದನ್ನು ನೋಡಿ ಗಂಡನು—ನಿನಗೆ ದೇವರ

ಹೇಳಿಕೆಯಲ್ಲಿ ನಂಬಿಗೆಯಿಲ್ಲವೇ? ಹಜರತ್ ಮೂಸಾ ಹೇಳಿದುದನ್ನು ಮರೆತೆಯಾ? ಯಾವನು ಮಂದಿಗೆ ಮಕ್ಕಳನ್ನು ಕೊಡಲಾಪನೋ ಆತನು ರೊಟ್ಟಿಗೆ ಗತಿಯಿಲ್ಲದೆ ಅಲೆಯಬಹುದೇ ಎಂದು ಕೇಳಿದನು. ಆದರೂ ಕುಂಬಾರನ ಹೆಂಡತಿ ಫಕೀರನ ಬಳಿಗೆ ಹೋಗಿ ಆತನ ಕಾಲಮೇಲೆ ಎರಗಿ ರೊಟ್ಟಿಗಳನ್ನು ನೀಡಲಾರಂಭಿಸಿದಳು. ಐದು ರೊಟ್ಟಿಗಳನ್ನು ನೀಡಿದ ಬಳಿಕ ಫಕೀರನು—ಸಾಕು, ನಿನಗೆ ಐವರು ಮಕ್ಕಳಾಗುವರು ಎಂದು ಹೇಳಿ ಹೊರಟು ಹೋದನು. ಮುಂದೆ ಅದೇ ಮೇರೆಗೆ ಆಕೆ ಐವರು ಮಕ್ಕಳನ್ನು ಹಡೆದಳು.

ಹಜರತ್ ಮೂಸಾ ಆಶ್ಚರ್ಯಚಕಿತನಾಗಿ ಪ್ರಾರ್ಥನಾಕಾಲದಲ್ಲಿ ಪರಮೇಶ್ವರನಿಗೆ ಈ ಮಾತನ್ನು ತಿಳಿಸಿ—ನಾನು ಸುಳ್ಳುಗಾರನಾದೆನು; ನನ್ನ ಮಾತನ್ನು ಯಾರೂ ನಂಬಲಾರರು ಎಂದು ಬಿನ್ನವಿಸಿದನು. "ಇಂಥ ದಿವಸ ಇಂಥ ಸ್ಥಳಕ್ಕೆ ಹೋಗಿ ಅಲ್ಲಿ ಏನು ನಡೆಯುವುದೆಂಬುದನ್ನು ನೋಡು" ಎಂದು ಆಕಾಶವಾಣಿಯಾಯಿತು. ಆ ಸ್ಥಳದಲ್ಲಿ ಆ ದಿವಸ ಜಾತ್ರೆ, ಸಾವಿರಾರು ಜನರು ನೆರೆದಿದ್ದರು. ಹಜರತ್ ಮೂಸಾ ಅಲ್ಲಿಗೆ ಹೋದನು. ಅಲ್ಲಿ ಒಬ್ಬ ಮನುಷ್ಯನು ಕೈಯಲ್ಲಿ ತಕ್ಕಡಿ ಕಲ್ಲುಗಳನ್ನೂ ಚೂರಿಯನ್ನೂ ಹಿಡಿದುಕೊಂಡು ನಿಂತು—ಪರಮೇಶ್ವರನ ಸಲುವಾಗಿ ನನಗೆ ಅರ್ಧಸೇರು ಮಾಂಸವು ಬೇಕಾಗಿದೆ; ಯಾರಾದರೂ ಪರಮೇಶ್ವರನ ಹೆಸರಿನಿಂದ ತಮ್ಮ ಶರೀರದಿಂದ ಕೊಡಬಹುದೋ ಎಂದು ಕೇಳುತ್ತ ನಿಂತಿದ್ದನು. ಯಾರೂ ಆತನ ಮಾತನ್ನು ಲಕ್ಷಿಸಲಿಲ್ಲ. ಕೊನೆಯಲ್ಲಿ ಒಬ್ಬ ದಿಗಂಬರ ಫಕೀರನು ಅಲ್ಲಿಗೆ ಬಂದು ಅರ್ಧಸೇರು ಮಾಂಸವಷ್ಟೇ ಏಕೆ? ಪರಮೇಶ್ವರನಿಗಾಗಿ ಇಡಿದೇಹವನ್ನೇ ಅರ್ಪಿಸಿದ್ದೇನೆ. ಎಂದು ಹೇಳಿ ಆ ಚೂರಿಯಿಂದ ಇರಿದುಕೊಂಡು ಅಲ್ಲಿಯೇ ಪ್ರಾಣಬಿಟ್ಟನು. ಈ ಭಯಂಕರವಾದ ನೋಟವನ್ನು ನೋಡಿ ಹಜರತ್ ಮೂಸಾ ಆಶ್ಚರ್ಯಪಟ್ಟು ಇದರ ಗುಟ್ಟನ್ನರಿಯಬೇಕೆಂದು ಪ್ರಾರ್ಥನಾಕಾಲದಲ್ಲಿ ಪರಮೇಶ್ವರನನ್ನು ಬೇಡಿಕೊಂಡನು. "ಈ ಫಕೀರನ ಆಶೀರ್ವಾದದಿಂದಲೇ ಕುಂಬಾರನ ಹೆಂಡತಿಯ ಹಣೆಬರಹವು ತಪ್ಪಿ ಆಕೆಗೆ ಮಕ್ಕಳಾದುವು; ಅವನು ಎಲ್ಲವನ್ನೂ ಅರ್ಪಿಸಿದವನು; ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ; ಅವನು ಹಣೆಬರಹವನ್ನು ತಪ್ಪಿಸುವಲ್ಲಿಯೂ ಸಮರ್ಥನು." ಎಂದು ಬಯಲು ನುಡಿ ಕೇಳಿಸಿತು.

---

ಅನಾವಶ್ಯಕವಾದ ವ್ಯಯವು
ಅಪವ್ಯಯವು.

## ೩೪. ಕರಂದೀಕರ ರಾವಜಿರಾಯರು.

ಕೆಲವು ವರ್ಷಗಳ ಹಿಂದೆ ಮುಂಬಯಿಕರ್ನಾಟಕದ ಎಜ್ಯುಕೇಶನಲ್ ಇನ್ಸ್‌ಪೆಕ್ಟರರಾಗಿಹೋದ ಕರಂದೀಕರ ರಾವಜಿರಾಯರೆಂಬ ತೇಜಸ್ವಿಪುರುಷರು ಬಾಲ್ಯದಲ್ಲಿ ದಾರಿದ್ರ್ಯಪೀಡಿತರಾಗಿದ್ದರೂ ವಿದ್ಯಾನುರಾಗವುಳ್ಳವರಾಗಿ ಆ ಕಾಲಕ್ಕೆ ಸಾಧ್ಯವಿದ್ದಷ್ಟು ವಿದ್ಯೆಯನ್ನು ಸಂಪಾದಿಸಿದರು. ಮುಂದೆ ಸರಕಾರಿ ನೌಕರಿಯಲ್ಲಿ ಸೇರಿ ಉಚ್ಚಪದಗಳನ್ನು ಹೊಂದುತ್ತ ತಮ್ಮ ನೌಕರಿಗೆ ಒಪ್ಪುವಂಥ ವೆಚ್ಚವನ್ನಿಟ್ಟುಕೊಂಡು ಪೆನ್‌ಶನ್ ಪಡೆಯುವ ಅವಧಿಗೆ ೨-೩ ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದರು. ಅವರ ಈ ಸಂಗ್ರಹಕ್ಕೆ ಮೊದಲಿನಿಂದಲೂ ಅವರು ದೊಡ್ಡ ಸಂಬಳದ ನೌಕರಿಯಲ್ಲಿದ್ದರೆಂಬುದೂ, ಬಡ್ಡಿಯ ಉತ್ಪನ್ನವು ಅದರಲ್ಲಿ ಸೇರುತ್ತ ನಡೆದಿತ್ತೆಂಬುದೂ ಕೆಲಮಟ್ಟಿಗೆ ಕಾರಣಗಳಾಗಿದ್ದರೂ ಮುಖ್ಯವಾಗಿ ಅನಾವಶ್ಯಕವಾದ ವೆಚ್ಚವನ್ನು ಮಾಡಬಾರದೆಂಬ ತತ್ತ್ವವನ್ನಿಟ್ಟುಕೊಂಡು ಅವರು ನಡೆದುದೇ ಮಹತ್ವದ ಕಾರಣವಾಗಿರುವುದು. ಅವರ ಶ್ರೀಮಂತಿಕೆಯಲ್ಲಿ ಕುದುರೆಯ ಗಾಡಿಯ ಮೇಲೆ ತಿರುಗಾಡುವುದು ಅವರಿಗೆ ಅರಿದಾಗಿರಲಿಲ್ಲ; ಮೋಟಾರನ್ನಿಡುವುದು ಏರಿದ್ದಾಗಿರಲಿಲ್ಲ. ಮನೆಯಲ್ಲಿ ಅಡಿಗೆ ನೀರಿನವರನ್ನಿಟ್ಟುಕೊಳ್ಳುವುದು ಹೆಚ್ಚಿನದಾಗಿರಲಿಲ್ಲ. ಆದರೂ ಅವರು ಅಂತಹ ಆಡಂಬರಕ್ಕೆ ಹೆಚ್ಚಿಗೆ ಅನುವು ಕೊಡದೆ ಕಡೆತನಕ ತೀರ ಸಾದಾವೃತ್ತಿಯವರಾಗಿದ್ದರು. ದ್ರವ್ಯಸಂಗ್ರಹ ಮಾಡುವುದೇ ಮನುಷ್ಯನಿಗೆ ಮುಖ್ಯ ಧ್ಯೇಯವಾಗಿರಬಾರದು; ದ್ರವ್ಯವು ಸಾಧನವು, ಸಾಧ್ಯವು ಬೇರೆಯಾಗಿರಬೇಕು. ದ್ರವ್ಯಸಂಗ್ರಹವನ್ನೇ ಮುಖ್ಯವಾಗಿಟ್ಟುಕೊಂಡರೆ ಆತ್ಮಗ್ಲಾನಿಯುಂಟಾಗುವುದು. ಹಾಗೆ ಮಾಡುವುದು ಕಾರ್ಪಣ್ಯವೆನಿಸುವುದು. ಅಂತರಾತ್ಮವು ಗ್ಲಾನಿಗೊಳ್ಳದಂತೆ ತಕ್ಕ ವ್ಯಯವನ್ನು ಮಾಡುತ್ತ ಉಳಿದ ಹಣವನ್ನು ಸಂಗ್ರಹಿಸಿಡುವುದು ಕುಟುಂಬದ ಮತ್ತು ದೇಶದ ಹಿತದ ದೃಷ್ಟಿಯಿಂದ ಮಹತ್ತ್ವದ್ದಾಗಿದೆ. ರಾವಜಿರಾಯರು ಈ ತತ್ತ್ವವನ್ನು ಹಿಡಿದು ನಡೆದು, ಸುಖವಿಲಾಸಗಳಿಗೆ ಮೆಚ್ಚದೆ ನೌಕರಿಯಂಥ ಸಾಮಾನ್ಯ ಉದ್ಯೋಗದಲ್ಲಿಯೂ ದ್ರವ್ಯಸಂಗ್ರಹ ಮಾಡಿ ಅಪವ್ಯಯವು ಉಚಿತವಲ್ಲವೆಂಬುದಕ್ಕೆ ಉದಾಹರಣವನ್ನು ತೋರಿಸಿಕೊಟ್ಟರು. ಮತ್ತು ತಾವು ಸಂಗ್ರಹಿಸಿದ ಹಣವನ್ನೆಲ್ಲ ಕರ್ನಾಟಕದ ವಿದ್ಯಾರ್ಥಿವರ್ಗಕ್ಕೆ ಸ್ಥಿರದಾನಮಾಡಿ ತಮ್ಮ ವಿದ್ಯಾನುರಾಗವನ್ನು ತೋರ್ಪಡಿಸಿದುದಲ್ಲದೆ ಕರ್ನಾಟಕಕ್ಕೆ ದಾನಶೂರತನದ ಮಾದರಿಯನ್ನು ಹಾಕಿಕೊಟ್ಟರು.

## ೩೫. ಶ್ರೀಮಚ್ಛಂಕರಾಚಾರ್ಯರು.

ಶ್ರೀಮಚ್ಛಂಕರಭಗವತ್ಪಾದರು ಸನಾತನ ವೈದಿಕಧರ್ಮಕ್ಕೆ ಬೌದ್ಧ ಧರ್ಮದಿಂದ ಒದಗಿದ್ದ ಗಂಡಾಂತರವನ್ನು ನೀಗುವ ಮಹತ್ತರವಾದ ಕಾರ್ಯವನ್ನು ಮಾಡಬೇಕಾಗಿದ್ದಿತು. ಇದಲ್ಲದೆ ವೇದಸಮ್ಮತಗಳೆಂದು ಭ್ರಮಿಸಿದ ಹಲವು ಪಂಥಗಳನ್ನು ನಿರಾಕರಿಸಿ ಶುದ್ಧ ಸಂಪ್ರದಾಯವನ್ನು ನೆಲೆಗೊಳಿಸುವುದೂ ಅವರ ಕೆಲಸವಾಗಿದ್ದಿತು. ಇದಕ್ಕಾಗಿ ಅವರು ವೇದ-ಉಪನಿಷತ್ತುಗಳಲ್ಲಿ ಹೇಳಿದ ಅದ್ವೈತತತ್ತ್ವವನ್ನು ಪ್ರಚಾರಗೊಳಿಸಬೇಕಾಗಿದ್ದಿತು. ಏಕೆಂದರೆ ಬುದ್ಧನು, ಉಪನಿಷತ್ತುಗಳಲ್ಲಿ ಹೇಳಿದ ಮೋಕ್ಷಮಾರ್ಗವನ್ನೇ ಸ್ವಲ್ಪ ಹೆಚ್ಚು ಕಡಮೆಮಾಡಿ ತನ್ನ ನುಡಿಗಳಿಂದ ಜನರಿಗೆ ಬೋಧಿಸಿದ್ದನು. ಆ ಬೋಧದಿಂದ ಮರುಳಾದ ಜನರಿಗೆ ವೇದ-ಉಪನಿಷತ್ತುಗಳಲ್ಲಿ ಹೇಳಿದ, ಅನಾದಿಯಾಗಿ ಬಂದ ಅದ್ವೈತತತ್ತ್ವದ ರುಚಿಯನ್ನು ತೋರಿಸಿ ನಿರ್ವಾಣಪಂಥದಲ್ಲಿ ವೈರಸ್ಯವನ್ನುಂಟುಮಾಡುವ ಮಹತ್ತ್ವದ ಕಾರ್ಯವನ್ನು ನೆರವೇರಿಸುವುದಕ್ಕೆ ಅವರು ಸಂಸಾರವನ್ನು ತೊರೆದು ಸಂನ್ಯಾಸವನ್ನು ಸ್ವೀಕರಿಸುವುದು ಅವಶ್ಯವಾಯಿತು. ಆಗ ಆಚಾರ್ಯರ ವಯಸ್ಸು ಎಂಟೊಂಬತ್ತು ವರ್ಷಮಾತ್ರ. ಅವರ ವೃದ್ಧ ಮಾತೃಶ್ರೀಯವರು ಈ ಸಣ್ಣ ಮಗುವು ಸಂನ್ಯಾಸಿಯಾಗುವನೆಂದರೆ ಹೇಗೆ ಒಪ್ಪಬೇಕು? ತಾಯಿಯ ಒಪ್ಪಿಗೆಯಿಲ್ಲದೆ ಆ ಮಾತೃಭಕ್ತರು ಮನೆಯನ್ನು ತೊರೆದು ಹೋಗಬಾರದೆಂದು ಮಾಡಿದ್ದರು. ತಾಯಿಯನ್ನು ಒಡಂಬಡಿಸಿ ಆಶೀರ್ವಾದವನ್ನು ಪಡೆದ ಹೊರತು ತಮ್ಮ ಮುಂದಿನ ಮಹತ್ತ್ವದ ಕಾರ್ಯಗಳು ಸಾಧಿಸಲಾರವೆಂದು ಅವರು ಭಾವಿಸಿದರು. 'ಮಾತೃದೇವೋಭವ' ಎಂಬ ಉಪನಿಷದ್ವಾಕ್ಯವನ್ನು ಅವರು ಕಡೆಗಣಿಸಲಿಲ್ಲ. ಈಗಲೂ ಯಾವ ಮಹಾಪುರುಷರ ಪ್ರತಿಭೆಯೂ, ವಿದ್ವತ್ತೆಯೂ ಜಗತ್ತಿಗೆಲ್ಲ ಆಶ್ಚರ್ಯಜನಕವಾಗಿರುವುವೋ, ಯಾವ ಮಹನೀಯರು ಆಕಲನಮಾಡಿದ ಅನೇಕ ವಿದ್ಯೆಗಳನ್ನು ಅವರಷ್ಟು ಅಲ್ಪವಯಸ್ಸಿನಲ್ಲಿ ಗ್ರಹಿಸುವುದು ಮಾನವಕೋಟಿಗೆ ಮೀರಿದುದೆಂದು ಈಗಲೂ ಅನಿಸುತ್ತಿರುವುದೋ, ಆ ಆಚಾರ್ಯರು ಹುಡುಗತನದ ಎಂಟೊಂಬತ್ತು ವರ್ಷದ ವಯಸ್ಸಿಗೆ ಸಂನ್ಯಾಸವನ್ನು ಸ್ವೀಕರಿಸಲು ಆತುರರಾಗಿ ಮುದುಕೆಯ ಮನಸ್ಸನ್ನು ಕಾಯುತ್ತಾರೆ! ಇದೆಂತಹ ಸ್ವರ್ಗೀಯ ದೃಶ್ಯವು! ಆ ಮಹಾನುಭಾವರು ಮಾತೃಶ್ರೀಯವರ ಸಮ್ಮತಿ

ಯನ್ನು ಒಂದು ಸುಲಭೋಪಾಯದಿಂದ ಪಡೆದರು. ಒಂದು ದಿನ ಅವರು ನದಿಯಲ್ಲಿ ಸ್ನಾನಕ್ಕೆ ಇಳಿದಾಗ ಮೊಸಳೆ ತನ್ನ ಕಾಲನ್ನು ಹಿಡಿದೆಳೆಯುತ್ತಿದೆ ಯೆಂದೂ ತಾನು ಸಂನ್ಯಾಸವನ್ನು ಸ್ವೀಕರಿಸುವೆನೆಂದು ಆಣೆಮಾಡಿದರೆ ಬಿಡುವುದೆಂದೂ ತಾಯಿಗೆ ಹೇಳಿದರು. ಆಚಾರ್ಯರು ತಮ್ಮ ತಪೋಬಲದಿಂದ ಮೊಸಳೆಯನ್ನು ನಿರ್ಮಿಸಿದ್ದರೆಂದು ಹೇಳುವರು. ಹೇಗಾದರೂ ಮಗನು ಬದುಕಿದರೆ ಸಾಕೆಂದು ಆ ಮುದುಕಮ್ಮನವರು ಮಗನಿಗೆ ಸಂನ್ಯಾಸಗ್ರಹಣಕ್ಕೆ ಅಪ್ಪಣೆಯನ್ನು ಕೊಟ್ಟರು. ಬ್ರಹ್ಮಜ್ಞಾನದಿಂದ ಪ್ರಪಂಚದ ಎಚ್ಚರವಿಲ್ಲದವರಾದರೂ ಆಚಾರ್ಯರು ಈ ಮಾನವಲೀಲೆಯಿಂದ ತಾಯಿಯ ಮನಸ್ಸನ್ನು ನೋಯಿಸದಿರುವುದು ಅವಶ್ಯವೆಂದು ಜಗತ್ತಿಗೆ ತೋರ್ಪಡಿಸಿರುವರು.

---

ಸ್ವದೇಶದ ಶಿಲ್ಪಿಗಳ ಮೇಲೆ ದಯೆ.

## ೩೬. ಮಿಸೆಸ್ ಚಾಪ್‌ಲೇನ್.

ಸ್ವದೇಶಭಕ್ತಿಯಲ್ಲಿ ಅಗ್ರಗಣ್ಯರಾದ ಇಂಗ್ಲಿಶರ ಆಳಿಕೆಯಲ್ಲಿ ಈ ವರೆಗೆ ಇದ್ದು ನಾವು ಈಗ ತಾನೇ ಸ್ವಲ್ಪಮಟ್ಟಿಗೆ ದೇಶೀಯ ಶಿಲ್ಪಗಳ ಕಡೆಗೆ ಗಮನವನ್ನಿಡುತ್ತಿರುವೆವು. ಸನ್ ೧೮೦೧ರಲ್ಲಿ ಇಂಗ್ಲಂಡದ ಬ್ಲಾಂಕನಿ ಗ್ರಾಮದಲ್ಲಿ ಮಿಸೆಸ್ ಚಾಪ್‌ಲೇನ್ ಎಂಬ ಒಬ್ಬ ಐಶ್ವರ್ಯವುಳ್ಳ ಹೆಂಗುಸು ವಾಸವಾಗಿದ್ದಳು. ಆ ಕಾಲದಲ್ಲಿ ಆ ಊರ ಸುತ್ತಲಿನ ಹಳ್ಳಿಗಳ ನೆಯ್ಕಾರರು ನೆಯ್ದ ಬಟ್ಟೆಯ ಮಾರಾಟವು ಕಡಿಮೆಯಾದುದರಿಂದ ಅವರು ತೊಂದರೆಬಡುತ್ತಿದ್ದರು. ಈ ಸ್ಥಿತಿಯನ್ನು ನೋಡಿ ಕನಿಕರಬಟ್ಟು ಆ ಸ್ತ್ರೀಯು ತನ್ನ ಮನೆಯಲ್ಲಿ ಬೇರೆ ತರದ ಬಟ್ಟೆಯನ್ನು ಉಪಯೋಗಿಸುವುದನ್ನು ಬಿಟ್ಟಳು. ಮತ್ತು ಒಂದು ದೊಡ್ಡ ಮೇಜವಾನಿಯ ಮತ್ತು ನಾಚಿನ ವ್ಯವಸ್ಥೆಮಾಡಿ ಬಹುಜನ ಶ್ರೀಮಂತರಿಗೆ ಆ ಸಮಾರಂಭಕ್ಕೆ ಬರಬೇಕೆಂದು ಕೆಲವು ದಿವಸ ಮೊದಲೇ ಆಮಂತ್ರಣ ಕಳುಹಿದಳು. ಆಮಂತ್ರಣಪತ್ರದಲ್ಲಿ—ಬಾಗಿಲಲ್ಲಿ ಆಮಂತ್ರಣಪತ್ರವನ್ನು ತೋರಿಸುವುದಕ್ಕೆ ಪ್ರತಿಯಾಗಿ ತಂತಮ್ಮ ಊರಿನ ನೆಯ್ಕಾರರ ರಸೀದಿಯನ್ನು ತೋರಿಸಬೇಕು; ಪ್ರತಿಯೊಬ್ಬನು ಕನಿಷ್ಠಪಕ್ಷ ೧೨ ಯಾರ್ಡ ಅರಿವೆಯನ್ನು ಹೊಸದಾಗಿ ಕೊಂಡಿರಬೇಕು; ಮತ್ತು ತಂತಮ್ಮ ಊರಿನ ಬಟ್ಟೆಯ ಉಡುಪನ್ನು ಧರಿಸಿಕೊಂಡೇ ಸಮಾರಂಭಕ್ಕೆ ಬರಬೇಕು ಎಂದು ಬರೆದಿತ್ತು. ಸ್ವದೇಶೀಯ ಜನರ ಮೇಲೆ ಅತ್ಯಂತ ಅಭಿಮಾನವುಳ್ಳ, ಉತ್ತಮ ಕಾರ್ಯಗಳಲ್ಲಿ ಒಮ್ಮನಸ್ಸಿನಿಂದ

ಸೇರುವ ಒಳವಿನ ಇಗ್ಲಿಶ್ ಸದ್ಗೃಹಸ್ಥರು ಮಿಸೆಸ್ ಚಾಪ್‌ಲೇನಳ ಸದುದ್ದೇಶ್ಯವನ್ನು ಮನವಂಪು ಸಂತೋಷದಿಂದ ಆಮಂತ್ರಣಕ್ಕೆ ಒಪ್ಪಿಕೊಂಡರು. ಈ ಉಪಾಯದಿಂದ ಕೂಡಲೆ ಅಲ್ಲಿಯ ನೆಯ್ಕಾರರ ಕಷ್ಟವು ಹೊರಟುಹೋಯಿತು.

"ಯಥಾ ಸ್ತ್ರೀತನಯಾಃ ಪೋಷ್ಯಾಃ ಸ್ವದೇಶೀ ಶಿಲ್ಪಿನಸ್ತಥಾ"--ತನ್ನ ಹೆಂಡಿರುಮಕ್ಕಳನ್ನು ಪೋಷಿಸುವಂತೆ ಸ್ವದೇಶದ ಶಿಲ್ಪಿಗಳನ್ನು ಪೋಷಿಸಬೇಕು ಎಂಬೀ ಮಾತನ್ನು ನಮ್ಮಲ್ಲಿ ಎಷ್ಟು ಜನರು ಲಕ್ಷಿಸುವರು? ಮಿಸೆಸ್ ಚಾಪ್‌ಲೇನಳಂತೆ ಈ ದೇಶದಲ್ಲಿ ಯಾರಾದರೂ ಆಮಂತ್ರಣ ಕೊಟ್ಟರೆ ಆ ಆಮಂತ್ರಣಕ್ಕೆ ಮಾನಕೊಡುವವರು ಎಷ್ಟುಜನರು ಹೊರಡಬಹುದು? ಆದರೆ ಇಂಗ್ಲಿಶ್ ಜನರು ಮಿಸೆಸ್ ಚಾಪ್‌ಲೇನಳ ಈ ಕೆಲಸವನ್ನು "ಸ್ತ್ರೀಯರು ಮಾಡಿದ ಮಹಾಕಾರ್ಯ"ಗಳಲ್ಲಿ ಸೇರಿಸಿ ಆಕೆಯ ಗೌರವವನ್ನು ಚೆನ್ನಾಗಿಯೇ ಮಾಡಿರುವರು.

---

ಕೃತಜ್ಞತೆ.

## ೩೭. ಒಬ್ಬ ಕಾಮದಾರನು.

ಒಬ್ಬ ಕಾಮದಾರನನ್ನು ಕುರಿತು ಆತನ ಸ್ನೇಹಿತನೊಬ್ಬನು ನಿಮ್ಮ ಸಂಬಳವನ್ನು ಹೇಗೆ ವಿನಿಯೋಗಿಸುವಿರಿ ಎಂದು ಕೇಳಲು ಕಾಮದಾರನು—ಅರ್ಧ ಸಂಬಳವನ್ನು ವೆಚ್ಚಮಾಡುವೆನು; ಕಾಲುಭಾಗವನ್ನು ಸಾಲಕೊಡುವೆನು; ಇನ್ನುಳಿದ ಕಾಲುಭಾಗದಿಂದ ಸಾಲವನ್ನು ತೀರಿಸುವೆನು ಎಂದು ಹೇಳಿದನು. ಸಾಲವನ್ನು ಕೊಡುವೆನೆಂದೂ ಸಾಲವನ್ನು ತೀರಿಸುವೆನೆಂದೂ ಹೇಳಿದುದನ್ನು ಕೇಳಿ ಸ್ನೇಹಿತನು, ಈತನು ತಾನೇ ಸಾಲಕೊಡುವವನು ಮುಂದಿಯ ಬಳಿಯಲ್ಲಿ ಸಾಲವನ್ನೇಕೆ ಮಾಡುವನೆಂಬುದನ್ನು ತಿಳಿಯದೆ, ನಿನ್ನ ಮಾತಿನ ಅರ್ಥವೇನೆಂದು ಮರಳಿ ಕೇಳಿದನು. ಆಗ ಆ ಕಾಮದಾರನು–ಅಯ್ಯಾ, ಅರ್ಧಸಂಬಳವನ್ನು ಮನೆಯ ವೆಚ್ಚಕ್ಕೆ ಉಪಯೋಗಿಸುವೆನು. ಕಾಲುಭಾಗವನ್ನು ಮಕ್ಕಳ ಶಿಕ್ಷಣಕ್ಕಾಗಿ ವೆಚ್ಚಮಾಡುವೆನು; ಈ ಕಾಲು ಭಾಗವನ್ನು ಮಕ್ಕಳಿಗೆ ಸಾಲ ಕೊಟ್ಟಂತಾಗಲಿಲ್ಲವೇ; ಇನ್ನುಳಿದ ಕಾಲುಭಾಗವನ್ನು ತಾಯಿತಂದೆಗಳ ಪೋಷಣಕ್ಕೆ ಕಳುಹಿಕೊಡುವೆನು. ತಾಯಿತಂದೆಗಳು ಬಾಲ್ಯದಲ್ಲಿ ನನ್ನನ್ನು ಸಲಹಿದುಡ್ಡನ್ನು ವೆಚ್ಚಮಾಡಿ ನನಗೆ ಶಿಕ್ಷಣವನ್ನು ಕೊಡಿಸಿರುವುದರಿಂದ ಅವರ ಸಾಲವು ನನ್ನ ಮೇಲೆ ಹೊತ್ತಿರುವುದು. ಅದನ್ನು ನಾನು ಈಗ ತೀರಿಸುವೆನು ಎಂದು ವಿವರಿಸಿ ಹೇಳಿದನು. ಈ ಕಲಿಕಾಲದಲ್ಲಿ ಮಕ್ಕಳಿಗೆ ಕೊಟ್ಟ ಸಾಲವನ್ನು ಅವರು ತೀರಿಸುವರೆಂಬ ಆಶೆಯನ್ನಿಟ್ಟುಕೊಳ್ಳುವುದು ಬೇಡ, ಆದರೆ ತಾನು

ತಾಯಿತಂದೆಗಳ ಸಾಲವನ್ನು ತೀರಿಸುವುದಕ್ಕೆ ಎಂದರೆ ಅವರ ಉಪಕಾರಕ್ಕೆ ಪ್ರತಿಯಾಗಿ ಕೃತಜ್ಞತೆಯಿಂದ ಅವರನ್ನು ವೃದ್ಧಾಪ್ಯದಲ್ಲಿ ಸಲಹುವುದಕ್ಕೆ ಯಾವ ಮಗನೂ ಬೇಸರಪಡಬಾರದು.

---

ಪ್ರಸಂಗಾವಧಾನ.

## ೩೮. ಸ್ಟೀಫನ್‌ಸನ್.

ಸುಮಾರು ೧೦೦ ವರ್ಷಗಳ ಹಿಂದೆ ಕಲಿಂಗ್‌ವರ್ಥ್ ಎಂಬಲ್ಲಿ ಒಂದು ಕಲ್ಲಿದ್ದಲಿಯ ಕಣಿಯ ತಳದಲ್ಲಿ ಅಕಸ್ಮಾತ್ತಾಗಿ ಬೆಂಕೆ ಹತ್ತಿತು. ಕಣಿಯಲ್ಲಿ ನೂರಾರು ಜನ ಹೆಂಗುಸರೂ ಗಂಡುಸರೂ ಹುಡುಗರೂ ಕೆಲಸಮಾಡುತ್ತಿದ್ದರು. ಸ್ವಲ್ಪ ವೇಳೆಯಲ್ಲಿ ಅವರೆಲ್ಲ ಅಗ್ನಿನಾರಾಯಣನಿಗೆ ಆಹುತಿಯಾಗುವ ವೇಳೆ ಬಂದಿತು. ಆಳವಾದ ಆ ಕಣಿಯ ತಳದಿಂದ ಆ ಕೂಲಿಕಾರರೆಲ್ಲ ಅಲ್ಪಾವಕಾಶದಲ್ಲಿ ಮೇಲೆ ಬರುವಂತೆ ಇರಲಿಲ್ಲ. ಒಬ್ಬ ಕೂಲಿಕಾರನು ಓಡುತ್ತ ಬಂದು ಈ ಸುದ್ದಿಯನ್ನು ಒಡೆಯನಾದ ಸ್ಟೀಫನ್ಸನ್ನನಿಗೆ ಹೇಳಿದನು. ಆತನು ಒಡನೆಯೆ ಅಲ್ಲಿಗೆ ಬಂದು ತನ್ನನ್ನು ಕಣಿಯ ತಳಕ್ಕಿಳಿಸುವಂತೆ ಅಲ್ಲಿಯ ಯಂತ್ರದವನಿಗೆ ಹೇಳಿದನು. ಸ್ಟೀಫನ್ಸನ್ನನನ್ನು ನೋಡಿದೊಡನೆ ಮೃತ್ಯುವಿನ ದವಡೆಯಲ್ಲಿ ಸಿಕ್ಕಿದ ಕಣಿಯೊಳಗಿನ ಕೂಲಿಕಾರರೆಲ್ಲ ತಮ್ಮ ಪ್ರಾಣಗಳನ್ನುಳಿಸಬೇಕೆಂದು ಗೋಳಿಡುತ್ತ ಆತನ ಸುತ್ತಲು ನೆರೆದರು. ಆಗ ಅವನು ಆ ಎಲ್ಲ ಜನರಿಗೆ ದೂರ ಸರಿಯುವಂತೆ ಹೇಳಿ ನಿಮ್ಮಲ್ಲಿ ನನ್ನನ್ನು ಹಿಂಬಾಲಿಸಿ ಉರಿಯ ಕಡೆಗೆ ಬರುವ ಧೈರ್ಯವುಳ್ಳ ಆರು ಜನರು ನಿಲ್ಲಿರಿ ಎಂದು ಸ್ಪಷ್ಟಧ್ವನಿಯಿಂದ ನುಡಿದನು. ಆಗ ಎಲ್ಲರೂ ಹಿಂದಕ್ಕೆ ಸರಿದರು. ಧೀರರಾದ ಆರು ಜನರು ಮಾತ್ರ ಸ್ಟೀಫನ್ಸನ್ನನ ಬಳಿಯಲ್ಲಿ ನಿಂತರು. ಆಗ ಅವನು ಅಲ್ಲಿಯೇ ಇದ್ದ ಸಲಿಕೆ, ಗುದ್ದಲಿ, ಗಚ್ಚು, ಕಲ್ಲು ಇವುಗಳಿಂದ ಬೆಂಕಿಹತ್ತಿದ ಭಾಗಕ್ಕೆ ಗೋಡೆಯನ್ನೇರಿಸಿದನು. ಸ್ವಲ್ಪ ವೇಳೆಯಲ್ಲಿ ಗೋಡೆ ಮುಗಿಯಿತು. ಆ ಗೋಡೆಯಿಂದ ಆ ಬೆಂಕೆ ಹತ್ತಿದ ಭಾಗವು ಪೂರ್ಣವಾಗಿ ಮುಚ್ಚಿಹೋದುದರಿಂದ ಹವೆ ದೊರೆಯದಂತಾಗಿ ಬೆಂಕೆ ಆರಿಹೋಯಿತು. ಸ್ವಲ್ಪ ಹೊತ್ತಿಗೆ ಮುಂಚೆ ಎದೆ ಎದೆ ಬಡಿದುಕೊಳ್ಳುತ್ತ ಅಳುತ್ತಿದ್ದ ಕೂಲಿಕಾರರ ಕೋಲಾಹಲವೆಲ್ಲ ಅಡಗಿ ಹೋಯಿತು. ಆಗ ಕೂಲಿಕಾರರು ಸ್ಟೀಫನ್ಸನ್ನನ ಕಾಲಿಗೆರಗಿ ಸಂತೋಷದಿಂದ ತಮ್ಮ ಕೃತಜ್ಞತೆಯನ್ನು ತೋರ್ಪಡಿಸಿದರು. ಆ ಕಣಿಯನ್ನು ಮುಂದೆ ಅಗಿಯದೆ ಸ್ಟೀಫನ್ಸನ್ನನ ಸ್ಮಾರಕವೆಂದು ಹಾಗೆಯೇ ಇಟ್ಟಿರುವರು.

---

ನಂಬಿಗೆ.

## ೩೯. ದ್ರೌಪದಿಯ ಸಾಧುದರ್ಶನ.

ಯುಧಿಷ್ಠಿರಮಹಾರಾಜನ ಅಶ್ವಮೇಧಯಜ್ಞವು ನಡೆದಾಗ ಶ್ರೀಕೃಷ್ಣನು ಯಜ್ಞಶಾಲೆಯಲ್ಲಿ ಒಂದು ಗಂಟೆಯನ್ನು ತೂಗಬಿಟ್ಟಿದ್ದನು; ಮತ್ತು ಅಶ್ವಮೇಧವು ಸಾಂಗವಾಗಿ ಪೂರ್ಣವಾದ ಕೂಡಲೆ ಈ ಗಂಟೆ ತಾನಾಗಿ ಬಾರಿಸುವುದು ಎಂದು ಹೇಳಿದ್ದನು. ಯಜ್ಞದ ಪೂರ್ಣಾಹುತಿಯಾಯಿತು; ಅವಭೃಥವಾಯಿತು. ಅನ್ನಸಂತರ್ಪಣೆಯಾಯಿತು; ಆದರೂ ಗಂಟೆ ಬಾರಿಸಲಿಲ್ಲ. ಒಬ್ಬರ ಮೋರೆಯನ್ನೊಬ್ಬರು ನೋಡತೊಡಗಿದರು. ಆಗ ಶ್ರೀಕೃಷ್ಣನು ಇಲ್ಲಿ ಸಮೀಪದಲ್ಲಿ ಯಾರಾದರೂ ಊಟಮಾಡದೆ ಉಳಿದಿರುವರೇ ನೋಡಿರಿ ಎಂದು ಹೇಳಿದನು. ಅತ್ತಿತ್ತ ನೋಡುವಷ್ಟರಲ್ಲಿ ಔತನ ಹೇಳಿದ ಒಬ್ಬ ಸಾಧುವು ಊಟಕ್ಕೆ ಬಂದಿರಲಿಲ್ಲ. ಅವನನ್ನು ಕರೆತರುವುದಕ್ಕೆ ಭೀಮಸೇನನು ಹೋದನು. ಸಾಧುವು ಅಶ್ವಮೇಧಫಲವನ್ನು ನನಗೆ ಕೊಟ್ಟ ಹೊರತು ಊಟಕ್ಕೆ ಬರುವುದಿಲ್ಲವೆಂದು ಹೇಳಿದನು. ಶ್ರೀಕೃಷ್ಣನು ಈ ಸಮಯಕ್ಕೆ ಅಲ್ಲಿಂದ ಮೆಲ್ಲನೆ ಕಾಲ್ತೆಗೆದು ಬೇರೆ ಕಡೆಗೆ ಹೋಗಿದ್ದನು. ಪಾಂಡವರು ಇಂಥ ದೊಡ್ಡ ಯಾಗವನ್ನು ಅತ್ಯಂತ ಶ್ರಮದಿಂದ ಮಾಡಿ ಬಂಧುವಧಪಾತಕದಿಂದ ಮುಕ್ತರಾಗಬೇಕೆಂದು ಆಲೋಚಿಸಿದ್ದರು. ಆದುದರಿಂದ ಅಶ್ವಮೇಧಫಲವನ್ನು ಸಾಧುವಿಗೆ ಕೊಡುವುದಕ್ಕೆ ಹಿಂದೆಮುಂದೆ ನೋಡತೊಡಗಿದರು. ಶ್ರೀಕೃಷ್ಣನೂ ಸಮೀಪದಲ್ಲಿರಲಿಲ್ಲ. ಏನು ಮಾಡಬೇಕೆಂಬುದು ತೋರದಿರಲು, ದ್ರೌಪದಿಯು—ನಾನು ಸಾಧುವನ್ನು ಊಟಕ್ಕೆ ಕರೆತರುವೆನೆಂದು ಹೇಳಿದಳು. ಸಾಧುವು ದ್ರೌಪದಿಗೂ ಅದೇ ಉತ್ತರವನ್ನು ಹೇಳಿದನು. ಆದರೆ ದ್ರೌಪದಿಯು—ಒಂದೇ ಅಶ್ವಮೇಧದ ಫಲವನ್ನೇಕೆ, ಸಹಸ್ರ ಅಶ್ವಮೇಧಗಳ ಫಲವನ್ನು ಅರ್ಪಿಸುವೆನು. ಸಾಧುದರ್ಶನಕ್ಕೆ ಹೊರಟರೆ ಅಡಿಗಡಿಗೆ ಅಶ್ವಮೇಧಫಲವು ಬರುವುದು. ತಮ್ಮನ್ನು ಕರೆವುದಕ್ಕೆ ಸಾವಿರ ಹೆಜ್ಜೆಗಳಿಗಿಂತ ಹೆಚ್ಚಿಗೆ ನಡೆದು ಬಂದಿರುವೆನು. ಆದುದರಿಂದ ನನಗೆ ಸಾವಿರಕ್ಕಿಂತ ಹೆಚ್ಚಿಗೆ ಅಶ್ವಮೇಧಗಳ ಫಲವು ಬಂದಿದೆ. ತಾವು ಒಂದು ಅಶ್ವಮೇಧದ ಫಲವನ್ನು ಸ್ವೀಕರಿಸಿ ದಯೆಮಾಡಿ ಊಟಕ್ಕೆ ಬರಬೇಕು ಎಂದು ಬೇಡಿಕೊಂಡಳು. ಈ ಮಾತನ್ನು ಕೇಳಿ ಸಾಧುವು ಸಂತೋಷಭರಿತನಾಗಿ ಊಟಕ್ಕೆ ಬಂದನು. ಸಾಧುವಿನ ಊಟವು ಮುಗಿಯಿತು; ಗಂಟೆ ಬಾರಿಸಿತು!

ಸ್ವಾಭಿಮಾನ.

## ೪೦. ಪ್ರಭುಣೆ ರಾಮಶಾಸ್ತ್ರಿಗಳು.

ಪ್ರಭುಣೆ ರಾಮನು ಒಬ್ಬ ಬಡವ ದೇಶಸ್ಥ ಬ್ರಾಹ್ಮಣನ ಮಗನು. ಬಾಲ್ಯದಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲತೆಯಿಲ್ಲದಿರಲು ಆಟನೋಟಗಳಲ್ಲಿಯೇ ವೇಳೆಯನ್ನು ಕಳೆದನು. ದೊಡ್ಡವನಾದ ಬಳಿಕ ಒಬ್ಬ ಸಿರಿವಂತನಾದ ಗೃಹಸ್ಥನಲ್ಲಿ ಸೇವೆ ಮಾಡಿಕೊಂಡು ಇದ್ದನು. ಒಂದಾನೊಂದು ದಿವಸ ರಾಮನು ಒಡೆಯನ ಕಾಲಿಗೆ ನೀರನ್ನು ಹನಿಸುತ್ತಿರುವಾಗ ಆತನ ದೃಷ್ಟಿ ಆ ಸಿರಿವಂತನ ಕಿವಿಯಲ್ಲಿದ್ದ ದೊಡ್ಡ ಮುತ್ತಿನ ಬಾವುಲಿಯ ಮೇಲೆ ಬಿದ್ದಿತು. ಹಾಗೆಯೇ ಆತನು ಅದನ್ನು ನೋಡುತ್ತಿರಲು, ಒಡೆಯನ ಕಾಲಮೇಲೆ ಹನಿಸುವ ನೀರು ನೆಲದ ಮೇಲೆ ಬೀಳಲಾರಂಭಿಸಿತು. ಇದರಿಂದ ಆ ಗೃಹಸ್ಥನು ಬೇಸರಗೊಂಡು—ಎಲೈ ನೀನು ಈ ಬಾವುಲಿಯ ಕಡೆಗೆ ಲಕ್ಷ್ಯವನ್ನು ಇಟ್ಟಂತೆ ವಿದ್ಯಾಭ್ಯಾಸದಲ್ಲಿ ಲಕ್ಷ್ಯವನ್ನು ಇಟ್ಟಿದ್ದರೆ ಈ ಹೀನವಾದ ಸೇವೆಯನ್ನು ಕೈಕೊಳ್ಳುವ ಸ್ಥಿತಿಯು ನಿನಗೆ ಬರುತ್ತಿರಲಿಲ್ಲ. ನಿನ್ನ ಕಿವಿಯಲ್ಲಿಯೂ ಬಾವುಲಿಯಿರಬಹುದಾಗಿದ್ದಿತು ಎಂದು ನುಡಿದನು. ಒಡೆಯನ ಈ ಮಾತುಗಳಿಂದ ರಾಮನಿಗೆ ಬಹಳ ನಾಚಿಕೆಯಾಯಿತು, ಬಹಳ ವ್ಯಥೆಯಾಯಿತು. ಆತನು ಆ ದಿನವೇ ಆ ಸೇವಾವೃತ್ತಿಯನ್ನು ಬಿಟ್ಟು ನೆಟ್ಟಗೆ ಕಾಶಿಗೆ ಹೋಗಿ ಒಮ್ಮನಸ್ಸಿನಿಂದ ಸಂಸ್ಕೃತ ವಿದ್ಯಾಭ್ಯಾಸವನ್ನು ಹಲವು ವರ್ಷಗಳವರೆಗೆ ಮಾಡಿದನು. ನ್ಯಾಯ, ವೇದಾಂತ, ಧರ್ಮಶಾಸ್ತ್ರ ಇವುಗಳಲ್ಲಿ ಅದ್ವಿತೀಯ ಪಂಡಿತನಾದನು. ದೇಶದೇಶಗಳಲ್ಲಿ ರಾಮಶಾಸ್ತ್ರಿಯ ವಿದ್ವತ್ತೆಯು ಪ್ರಖ್ಯಾತವಾಯಿತು. ಪುಣೆಯ ದೊಡ್ಡ ಮಾಧವರಾವ ಪೇಶವೆಯು ಈ ಶಾಸ್ತ್ರಿಯನ್ನು ಸಂತೋಷದಿಂದ ತನ್ನ ರಾಜ್ಯದ ಮುಖ್ಯ ನ್ಯಾಯಾಧೀಶನನ್ನಾಗಿ ನಿಯಮಿಸಿಕೊಂಡನು. ನಿಷ್ಪಕ್ಷಪಾತವಾಗಿ ತೀರ್ಪುಗಳನ್ನು ಹೇಳುತ್ತ ಸತ್ಯಶೀಲರಾಗಿ ರಾಮಶಾಸ್ತ್ರಿಗಳು ಒಳ್ಳೆಯ ನ್ಯಾಯಾಧೀಶರೆಂಬ ಕೀರ್ತಿಯನ್ನು ಪಡೆದರು. ಪೇಶವೆಯರ ಆಳಿಕೆಯಲ್ಲಿ ಆಗಿಹೋದ ದೊಡ್ಡ ಮನುಷ್ಯರಲ್ಲಿ ಮಾಧವರಾಯರ ಓಲಗದಲ್ಲಿ ಮುಖ್ಯ ನ್ಯಾಯಾಧೀಶರಾಗಿದ್ದ ಪ್ರಭುಣೆ ರಾಮಶಾಸ್ತ್ರಿಗಳಷ್ಟು ಘನತೆಯನ್ನೂ ಪ್ರಸನ್ನತೆಯನ್ನೂ ಹೊಂದಿರುವವರು ಯಾರೂ ಇಲ್ಲ. ನೀರಿನ 'ರಾಮನು' ರಾಮಶಾಸ್ತ್ರಿಗಳವರು' ಎಂದು ಎನಿಸಿಕೊಂಡನು.

———

ನಿಸ್ಪೃಹಸ್ಯ ತೃಣಂ ಜಗತ್.

## ೪೧. ಪ್ರಭುಣೆ ರಾಮಶಾಸ್ತ್ರಿಗಳು.

ನಿಸ್ಪೃಹ ಮನುಷ್ಯನು ಜಗತ್ತನ್ನು ತೃಣವಂತೆ ಭಾವಿಸುವನು. ಸ್ವಾರ್ಥ ಸಾಧುವು ಯಾವನೊಬ್ಬನಿಗೆ ಇಲ್ಲದ ಗೌರವವನ್ನು ತೋರ್ಪಡಿಸುವಂತೆ ನಿಸ್ಪೃಹನು ತೋರ್ಪಡಿಸುವುದಿಲ್ಲ.

ಒಂದು ಸಮಯದಲ್ಲಿ ಪೇಶವೆ ಮಾಧವರಾಯನು ಪುಣೆಯೊಳಗೆ ಆದ ವೈದಿಕರ ಉಪನ್ಯಾಸಗಳನ್ನು ಕೇಳಿ ತಾನು ಸ್ನಾನಸಂಧ್ಯಾಜಪತಪಗಳಲ್ಲಿ ಹೆಚ್ಚು ವೇಳೆಯನ್ನು ಕಳೆಯಬೇಕೆಂದು ಸಂಕಲ್ಪಿಸಿದನು. ಆ ಮೇರೆಗೆ ಆತನು ಅನುಷ್ಠಾನದಲ್ಲಿ ಬಹಳ ವೇಳೆಯನ್ನು ಕಳೆಯಲಾರಂಭಿಸಿದನು. ಒಂದು ದಿವಸ, ನ್ಯಾಯಾಧೀಶರಾಗಿದ್ದ ಪ್ರಭುಣೆ ರಾಮಶಾಸ್ತ್ರಿಗಳು ಕೆಲವೊಂದು ಸರಕಾರಿ ಕೆಲಸಕ್ಕೋಸ್ಕರ ಮಾಧವರಾಯನನ್ನು ಕಾಣುವುದಕ್ಕೆ ಬಂದರು. ಪೇಶವೆಯು ಅನುಷ್ಠಾನದಲ್ಲಿ ತೊಡಗಿರುವನೆಂದು ತಿಳಿಯಬಂದುದರಿಂದ ಆ ದಿವಸ ಹಾಗೆಯೇ ಹೊರಟು ಹೋಗಬೇಕಾಯಿತು. ಒಂದೆರಡು ದಿವಸ ಇದೇ ಮೇರೆಗೆ ಆಗಲು ಮೂರನೆಯ ದಿವಸ ಶಾಸ್ತ್ರಿಗಳು ಬೇರೆ ವೇಳೆಯಲ್ಲಿ ಮಾಧವರಾಯನನ್ನು ಕಾಣುವುದಕ್ಕೆ ಬಂದರು. ಮಾಧವರಾಯನು ಸ್ನಾನಸಂಧ್ಯಾದಿಗಳಲ್ಲಿ ಕಾಲಕಳೆಯುತ್ತ ರಾಜಕೀಯ ಕಾರ್ಯಗಳಿಗೆ ತೊಂದರೆಯಾಗುವಂತೆ ಮಾಡುವುದು ಅವರ ಮನಸ್ಸಿಗೆ ಬಂದಿರಲಿಲ್ಲ. ಆಗ ಅವರು ಪೇಶವೆಯನ್ನು ಕಂಡು ನಾನು ನನ್ನ ಸ್ಥಳಕ್ಕೆ 'ರಾಜೀನಾಮೆ' ಕೊಡುವೆನು; ನನಗೆ ಕಾಶಿಯಲ್ಲಿರುವ ಮನಸ್ಸಾಗಿದೆ ಎಂದರು. ಶಾಸ್ತ್ರಿಗಳು ಹೀಗೇಕೆ ಮಾತಾಡುವರೆಂಬುದು ಮಾಧವ ರಾಯನಿಗೆ ಹೊಳೆಯಿತು. ನುತ್ತು ಎರಡು ದಿವಸ ತಾನು ಅನುಷ್ಠಾನದಲ್ಲಿದ್ದುದರಿಂದ ದರ್ಶನ ಕೊಡುವುದಕ್ಕೆ ಆಗಲಿಲ್ಲ; ಅದನ್ನು ತಾವು ಕ್ಷಮಿಸಬೇಕು ಎಂದು ಆತನು ಕೇಳಿಕೊಂಡನು. ಅದನ್ನು ಕೇಳಿ ರಾಮಶಾಸ್ತ್ರಿಗಳು– ನೀವು ಕ್ಷತ್ರಿಯವೃತ್ತಿಯನ್ನು ಸ್ವೀಕರಿಸಿ ರಾಜರೆನಿಸಿಕೊಂಡಿರುವಿರಿ; ಪ್ರಜೆಗಳ ಕೆಲಸವನ್ನು ನೋಡುವುದಕ್ಕೆ ನಿಮಗೆ ವೇಳೆಯಿರಬಾರದೇ! ಅರಸನಿಗೆ ಪ್ರಜೆಗಳ ಕಾರ್ಯಗಳಲ್ಲಿ ತತ್ಪರನಾಗಿರುವುದರಿಂದಲೇ ಮೋಕ್ಷವು ದೊರೆಯುವುದೆಂದು ನನ್ನ ನಂಬುಗೆಯುಂಟು; ಹೀಗಿದ್ದರೂ ನಿಮಗೆ ಅನುಷ್ಠಾನದಲ್ಲಿಯೇ ಕಾಲಕಳೆಯುವ ಮನಸ್ಸಿದ್ದರೆ ನನ್ನೊಡನೆ ಕಾಶಿಗೆ ಬಂದು ಇದ್ದರೆ ಅಲ್ಲಿ ಬೇಕಾದ ಹಾಗೆ ಸ್ನಾನಸಂಧ್ಯಾದಿಗಳನ್ನು ಮಾಡಿಕೊಂಡು ಇರಬಹುದು ಎಂದು

ಹೇಳಿದರು. ಮಾಧವರಾಯನು ರಾಮಶಾಸ್ತ್ರಿಗಳ ಈ ಉಪದೇಶವನ್ನು ಕೇಳಿ ತನ್ನ ಕರ್ತವ್ಯಗಳನ್ನು ಹೆಚ್ಚಿಗೆ ಮನಸ್ಸುಗೊಟ್ಟು ಮಾಡತೊಡಗಿದನು. ಮತ್ತು ಮಹತ್ವದ ಎಲ್ಲ ಕೆಲಸಗಳಲ್ಲಿ ರಾಮಶಾಸ್ತ್ರಿಗಳ ಆಪ್ತಾಲೋಚನೆಯನ್ನು ಕೇಳತೊಡಗಿದನು.

---

ನಿಸ್ಪೃಹಸ್ಯ ತೃಣಂ ಜಗತ್.

## ೪೨. ಪ್ರಭುಣೆ ರಾಮಶಾಸ್ತ್ರಿಗಳು.

ಪೇಶವೆ ಮನೆತನದ ರಾಘೋಬನ ಅಧಿಕಾರಲೋಭ, ಆತನ ಹೆಂಡತಿ ಆನಂದೀಬಾಯಿಯ ಮಿತಿಮೀರಿದ ಮಾತ್ಸರ್ಯ-ಮಹತ್ವಾಕಾಂಕ್ಷೆಗಳು ಇವುಗಳ ಮೂಲಕ ಪುಣೆಯಲ್ಲಿ–'ಶನಿವಾರವಾಡೆ' ಯಲ್ಲಿ–ಪೇಶವೆನಾರಾಯಣರಾಯನ ಕೊಲೆಯಾಯಿತು. ಆನಂದೀಬಾಯಿಯು ರಾಘೋಬನಿಂದ—"ನಾರಾಯಣರಾಯನನ್ನು ಹಿಡಿಯಬೇಕು." (ಧರಾವೇ) ಎಂಬ ಅರ್ಥದ ಒಂದು ಪತ್ರವನ್ನು ಬರೆಯಿಸಿ ಅದರಲ್ಲಿ ತನ್ನ ಕುಶಲತನದಿಂದ (ಧರಾವೇ ಎಂಬಲ್ಲಿಯ ಧ ಸ್ಥಳದಲ್ಲಿ ಮಾ ಮಾಡಿ, ಮಾರಾವೇ = ಕೊಲ್ಲಬೇಕು ಎಂದು) ತಿದ್ದಿ ಪಠಾಣ ಸಿಪಾಯಿಗಳಿಂದ ಆ ಕೊಲೆಯನ್ನು ಮಾಡಿಸಿದಳು. ಆ ಕೊಲೆಗೆ ರಾಘೋಬನೇ ಮೂಲಕಾರಣವೆಂದು ಎಲ್ಲರೂ ಆತನ ಮೇಲೆ ಆರೋಪವಿಟ್ಟರು.

ಆಗ ರಾಘೋಬನು ಒಂದು ಬ್ರಾಹ್ಮಣಸಭೆಯನ್ನು ನೆರೆಯಿಸಿ ತಾನು ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನೇನು ಮಾಡಿಕೊಳ್ಳಬೇಕೆಂದು ಕೇಳಿದನು. ಆ ಸಭೆಗೆ ಪ್ರಭುಣೆ ರಾಮಶಾಸ್ತ್ರಿಗಳನ್ನೂ ಕರೆಯಿಸಿದ್ದರು. ಅವರು ತಮ್ಮ ಹೆಂಡಿರುಮಕ್ಕಳನ್ನು ಮಾಹುಲಿ ಗ್ರಾಮಕ್ಕೆ ಕಳುಹಿ ಬಳಿಕ ಸಭೆಗೆ ಬಂದರು. ಆಗ ಶಾಸ್ತ್ರಾರ್ಥಕ್ಕೆ ಆರಂಭವಾಯಿತು. ಒಬ್ಬ ಪಂಡಿತನು—ಪಠಾಣ ಸಿಪಾಯಿಗಳು ಕೊಲೆ ಮಾಡಿದವರು; ರಘುನಾಥರಾಯರ ಮೇಲೆ ಶಬ್ದದೋಷದ ಆರೋಪವು ಬಂದಿದೆ. ಏನಾದರೊಂದು ಸಣ್ಣ ಪ್ರಾಯಶ್ಚಿತ್ತವನ್ನು ಹೇಳಬೇಕು ಎಂದು ಪ್ರಸ್ತಾವಮಾಡಿದನು. ಆಗ ರಾಮಶಾಸ್ತ್ರಿಗಳು—ಇದಕ್ಕೆ ಪ್ರಾಯಶ್ಚಿತ್ತವೇನಿದೆ? ಮತ್ತು ಅದನ್ನು ಯಾರಿಗೆ ಮಾಡಬೇಕು? ಬ್ರಹ್ಮಹತ್ಯೆ, ಗೋಹತ್ಯೆ ಮೊದಲಾದುವುಗಳಿಗೆ ಧರ್ಮಶಾಸ್ತ್ರದ ಪುಸ್ತಕಗಳಲ್ಲಿ ಪ್ರಾಯಶ್ಚಿತ್ತವನ್ನು ಹೇಳಿಲ್ಲ. ಇದಕ್ಕೆ ದೇಹಾಂತ ಪ್ರಾಯಶ್ಚಿತ್ತವೇ ಪ್ರಾಯಶ್ಚಿತ್ತವು; ಮೊದಲು ಸೀಸವನ್ನು ಕರಗಿಸಿ ಕುಡಿಯಿಸಬೇಕು; ಇಲ್ಲವೆ ದರ್ಭೆ

ಯಿಂದ ಮನೆಯನ್ನು ಮಾಡಿ ಅದರಲ್ಲಿ ಕುಳ್ಳಿರಿಸಿ ಅದಕ್ಕೆ ಅಗ್ನಿಸಂಸ್ಕಾರ ಮಾಡಬೇಕು; ಇದರಲ್ಲಿ ಬದುಕಿ ಉಳಿದರೆ ಮುಂದೆ ಪ್ರಾಯಶ್ಚಿತ್ತವಿಚಾರವು ಎಂದು ಸ್ಪಷ್ಟವಾಗಿ ಹೇಳಿದರು. ಆಗ ಮೊದಲಿನ ಪಂಡಿತನು—ಶಾಸ್ತ್ರಿಗಳೇ ಇದನ್ನೇನು ಆರಂಭಿಸಿದಿರಿ, ಯಾರ ಸಲುವಾಗಿ ಪ್ರಾಯಶ್ಚಿತ್ತವನ್ನು ಹೇಳುವು ದಿದೆಯೆಂಬುದನ್ನು ಮರೆತಿರೋ ಎಂದು ಆಕ್ಷೇಪಿಸಿದನು. ಆಗ ರಾಮಶಾಸ್ತ್ರಿ ಗಳು ಸಂತಾಪದಿಂದ—"ನಾನು ಈ ರಾಜ್ಯದಲ್ಲಿಯೇ ನಿಲ್ಲುವುದಿಲ್ಲ; ನೀವು ಇವರ ಆಶ್ರಯದಲ್ಲಿ ಇರುವವರಾದುದರಿಂದ ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಮಾತನಾಡುವಿರಿ; ನಾನು ಹೆಂಡಿರುಮಕ್ಕಳನ್ನು ಈ ಮೊದಲೇ ಕಳುಹಿರು ವೆನು. ನಿನ್ನೆ ಕೊಲೆಯಾದಾಗಿನಿಂದ ನಾನು ಉಪವಾಸ ಮಾಡಿರುವೆನು, ನೀರನ್ನು ಕೂಡ ಮುಟ್ಟಿಲ್ಲ; ನಾನು ಇಲ್ಲಿ ಇನ್ನು ನೀರನ್ನು ಸಹ ಕುಡಿಯು ವುದಿಲ್ಲ; ಹೀಗೆಯೇ ಇಲ್ಲಿಂದ ಹೊರಟುಹೋಗುವೆನು; ನಾನು ಜೀವವನ್ನು ಕೊಡಲು ಕೂಡ ಸಿದ್ಧನಾಗಿದ್ದೇನೆ; ಬೇಕಾದರೆ ಇನ್ನೊಂದು ಬ್ರಹ್ಮಹತ್ಯೆ ಯನ್ನು ಮಾಡುವುದಿದ್ದರೆ ಮಾಡಲಿ" ಎಂದು ಹೇಳಿ ಎದ್ದು ನಿಂತರು. ಈ ಸ್ಪಷ್ಟವಾದ ನುಡಿಗಳನ್ನು ಕೇಳಿ ಯಾರ ಬಾಯಿಂದಲೂ ಮಾತು ಹೊರಡ ಲಿಲ್ಲ. ಶಾಸ್ತ್ರಿಗಳು ಹಾಗೆಯೇ ಅಲ್ಲಿಂದ ಹೊರಟು ಮಾಹುಲಿಗೆ ಹೋಗಿ ಬಳಿಕ ಸ್ನಾನಮಾಡಿ ಊಟ ಮಾಡಿದರು.

---

ತನ್ನ ದೋಷಗಳನ್ನು ನೋಡಿಕೊಳ್ಳುವ ರೂಢಿ.

## ೪೩. ಮುಖದುಂ ಶಾ.

ಬಿಹಾರದಲ್ಲಿ ಮುಖದುಂ ಶಹನ ಗೋರಿಯುಂಟು. ಅವನು ರಾಜಗೃಹ ಎಂಬಲ್ಲಿ ಒಂದು ಪರ್ವತಗುಹೆಯೊಳಗೆ ತಪಸ್ಸುಮಾಡುತ್ತಿದ್ದನು. ಅಲ್ಲಿಂದ ಒಮ್ಮೆ ಬಿಹಾರಕ್ಕೆ ಬರುವಾಗ ದಾರಿಯಲ್ಲಿ ಮೂತ್ರೋತ್ಸರ್ಜನಕ್ಕಾಗಿ ಸ್ವಲ್ಪ ಕೆಳಗಿಳಿದು ಹೊಲದ ದಂಡೆಗೆ ಕುಳಿತನು. ಅದು ಕಡಲೆಯ ಹೊಲವು. ಹೊಲದವನು ಈ ದಾರಿಕಾರನು ಕಡಲೆಯ ಗಿಡಗಳನ್ನು ಕಿತ್ತುಕೊಳ್ಳುವು ದಕ್ಕೆ ಕುಳಿತಿರುವನೆಂದು ತಿಳಿದು ಏನೂ ಮಾತಾಡದೆ ಹಿಂದಿನಿಂದ ಬಂದು ಕೋಲಿನಿಂದ ಆ ಫಕೀರನ ತಲೆಯ ಮೇಲೆ ಒಂದು ಬಲವಾದ ಏಟನ್ನು ಹಾಕಿ ದನು. ಫಕೀರನು ಯಾವ ಮಾತನ್ನೂ ಆಡಲಿಲ್ಲ. ಆದರೆ ತನ್ನನ್ನು ಕುರಿತು— ಎಲೋ ಸಾರಫಾ, (ಆತನನ್ನು ಜನರು ಸಾರಫಾ ಎಂದು ಕರೆಯುತ್ತಿದ್ದರು.)

ದಾರಿಯನ್ನು ಬಿಟ್ಟು ಹೋಗಿ ಹೇಗೆ ಏಟು ತಿಂದೆ? ಎಂದುಕೊಂಡನು. ಎಲ್ಲ ದೋಷವೂ ತನ್ನದೇ; ತಾನು ಬೀಳುನೆಲದಲ್ಲಿ ಇಲ್ಲವೆ ಗಿಡದ ಮರೆಗೆ ಕುಳಿತುಕೊಂಡಿದ್ದರೆ ಹೊಲದವನಿಗೆ ಈ ತಪ್ಪು ತಿಳಿವಳಿಕೆ ಉಂಟಾಗುತ್ತಿರಲಿಲ್ಲವೆಂದು ಆತನ ಅಭಿಪ್ರಾಯವು.

---

ಶಿಷ್ಟಾಚಾರ.

## ೪೪. ಲಾರ್ಡ್ ಸ್ಟೇಯರ್.

ಒಂದಾನೊಂದು ದಿವಸ ಫ್ರಾನ್ಸದ ಅರಸನಾದ ೧೪ ನೆಯ ಲುಯಿಯ ಓಲಗಕ್ಕೆ ಇಂಗ್ಲಂಡದ ರಾಯಭಾರಿಯಾದ ಲಾರ್ಡ್ ಸ್ಟೇಯರ್ ಎಂಬವರು ಬರುವರೆಂಬುದನ್ನು ಕೇಳಿ ಓಲಗದೊಳಗಿನ ಒಬ್ಬ ಸಭಾಸದನು ಲಾರ್ಡ್ ಸ್ಟೇಯರರು ಶಿಷ್ಟಾಚಾರಪಾಲನೆಯಲ್ಲಿ ಅದ್ವಿತೀಯರು ಎಂದು ಹೇಳಿದನು. ಆಗ ಲುಯಿರಾಜನು ಈ ಮಾತಿನ ಪರೀಕ್ಷೆ ಈಗಲೇ ಆಗಿಹೋಗುವುದು ಎಂದನು. ಇಷ್ಟರಲ್ಲಿ ಲಾರ್ಡ್ ಸ್ಟೇಯರನು ಬಂದು ಅರಸನಿಗೆ ನಮಸ್ಕಾರ ಮಾಡಿ ನಿಂತುಕೊಂಡನು. ಇದೇ ಸಮಯದಲ್ಲಿ ಹೊರಗೆ ತಿರುಗಾಡುವುದಕ್ಕೆ ಹೋಗುವುದಕ್ಕಾಗಿ ಅರಸನ ರಥವೂ ಬಂದು ನಿಂತಿತು. ಅರಸನು ಲಾರ್ಡ್ ಸ್ಟೇಯರನಿಗೆ ರಥದಲ್ಲಿ ಕುಳ್ಳಿರ ಹೇಳಿದನು. ಲಾರ್ಡ್ ಸ್ಟೇಯರನು ಸ್ವಲ್ಪ ಕೂಡ ತಡಮಾಡದೆ ಅರಸನಿಗಿಂತ ಮೊದಲು ರಥವನ್ನೇರಿ ಕುಳಿತುಕೊಂಡನು. ಆಗ ಅರಸನು ಸ್ಟೇಯರನನ್ನು ಕುರಿತು—ನಿಮ್ಮ ವಿಷಯವಾಗಿ ನಾನು ಕೇಳಿದ ಮಾತು ನಿಜವೆಂದು ಈಗ ಕಂಡುಬಂದಿತು. ನಿಮ್ಮ ಶಿಷ್ಟಾಚಾರದ ಕಲ್ಪನೆಯು ಸಮಂಜಸವಾದುದು; ಅನ್ಯರು ಈ ಪ್ರಸಂಗದಲ್ಲಿ—ತಾವು ಮೊದಲು ಹತ್ತತಕ್ಕುದು, ನಾನೇಕೆ ಎಂದೆನ್ನುತ್ತ ಸುಮ್ಮನೆ ನನಗೆ ತೊಂದರೆ ಕೊಡುತ್ತಿದ್ದರು. ಅದರಿಂದ ನನಗೆ ರಥವನ್ನೇರುವುದಕ್ಕೆ ನಿಷ್ಕಾರಣವಾಗಿ ವಿಲಂಬವನ್ನು ಮಾಡಿಬಿಡುತ್ತಿದ್ದರು ಎಂದು ಹೇಳಿದನು.

ದೊಡ್ಡವರ ಅಪ್ಪಣೆಯನ್ನು ಪಾಲಿಸುವುದೇ ನಿಜವಾದ ಶಿಷ್ಟಾಚಾರವು.

---

ಅರಸನ ಕರ್ತವ್ಯ.

## ೪೫. ಸುಲ್ತಾನ್ ಸುಲೇಮಾನ್.

ತುರ್ಕಸ್ತಾನದ ಸುಲ್ತಾನನಾದ ಸುಲೇಮಾನನು ಬೆಲ್‌ಗ್ರೇಡ್ ಪಟ್ಟಣವನ್ನು ಆಕ್ರಮಿಸಿದ ಕೆಲವು ದಿವಸಗಳ ತರುವಾಯ ಒಬ್ಬ ಕ್ರಿಶ್ಚಿಯನ್ ಮುದುಕಿ ಆತನ ಬಳಿಗೆ ಬಂದು ತನ್ನ ಎಲ್ಲ ಆಸ್ತಿಯನ್ನು ಕಳ್ಳರು ನಿನ್ನೆ ರಾತ್ರಿ

ಕದ್ದೊಯ್ದರೆಂದು ಅರಿಕೆ ಮಾಡಿಕೊಂಡಳು. ಸುಲ್ತಾನನು ಮುದುಕೆಗೆ ನೀನು ಎಚ್ಚರದಿಂದ ಏಕೆ ಇರಲಿಲ್ಲ? ನೀನು ಗಲಾಟೆ ಮಾಡಿದ್ದರೆ ಕಳ್ಳರಿಗೆ ಏನೂ ಆಸ್ಪದವಾಗುತ್ತಿರಲಿಲ್ಲ; ಎಂದು ನುಡಿದನು. ಆಗ ಆ ಮುದುಕೆ—ಪ್ರಜೆಗಳ ಸಲುವಾಗಿ ನೀವೂ ನಿಮ್ಮ ಅಧಿಕಾರಿಗಳೂ ಎಚ್ಚರದಿಂದ ಇರುವಿರೆಂಬ ನಂಬುಗೆಯಿಂದ ನಾನು ಮಲಗಿದ್ದೆನು, ಎಂದು ಉತ್ತರಕೊಟ್ಟಳು. ಕರ್ತವ್ಯ ನಿಷ್ಠನಾದ ಸುಲ್ತಾನನು ಈ ಉತ್ತರದಿಂದ ಸಂತುಷ್ಟನಾಗಿ ಬಹಳ ಪ್ರಯತ್ನ ಪಟ್ಟು ಆ ಕಳವನ್ನು ಶೋಧಿಸಿಕೊಟ್ಟನು.

---



ಒಕ್ಕಟ್ಟು.

## ೪೬. ಯುಧಿಷ್ಠಿರ.

ಒಕ್ಕಟ್ಟಿನ ವಿಷಯದಲ್ಲಿ ಭರತಖಂಡದ ಚಕ್ರವರ್ತಿಯಾಗಿ ಹೋದ ಯುಧಿಷ್ಠಿರ ಮಹಾರಾಜನು ಮಾಡಿದ ಉಪದೇಶವನ್ನು ನಾವು ಬಳಕೆಯಲ್ಲಿ ತಂದುಕೊಂಡಿಲ್ಲ. ಯುರೋಪಿಯನ್ನರು ಈ ವಿಷಯದಲ್ಲಿ ಬಹಳ ಮುಂದು ವರಿದವರು. ಅವರಲ್ಲಿಯೂ ಒಳಗೆ ಮತಭೇದಗಳೂ, ಪಂಗಡಗಳೂ ಹಲವು ಉಂಟು; ಆದರೂ ಹೊರಗೆ ಅವರೆಲ್ಲರೂ ಒಂದೇ ಪಂಗಡದವರೆಂಬಂತೆ ಕಾಣಿಸಿಕೊಳ್ಳುವರು.

ಪಾಂಡವರು ವನವಾಸದಲ್ಲಿರುವಾಗ ಒಂದಾನೊಂದು ದಿವಸ ದುರ್ಯೋಧನನು ತನ್ನ ಐಶ್ವರ್ಯವನ್ನು ಪಾಂಡವರಿಗೆ ತೋರಿಸಿ ಅವರ ಮನಸ್ಸನ್ನು ನೋಯಿಸಬೇಕೆಂದು ಕರುಹಟ್ಟಿಗಳನ್ನು ನೋಡಿಕೊಂಡು ಬರುವ ನೆವದಿಂದ ತನ್ನ ಪರಿವಾರವನ್ನೆಲ್ಲ ಸಂಗಡ ಕರೆದುಕೊಂಡು ಮಹಾವೈಭವದಿಂದ ಪಾಂಡವರಿದ್ದ ಅಡವಿಗೆ ಬಂದನು. ಅಲ್ಲಿ ದುರ್ಯೋಧನನ ಸೈನಿಕರು ಚಿತ್ರರಥನೆಂಬ ಗಂಧರ್ವನ ಹೂದೋಟವನ್ನು ಹೊಕ್ಕು ಹಾನಿಮಾಡಲು ಗಂಧರ್ವನು ಸಿಟ್ಟಾಗಿ ಕೌರವರನ್ನೆಲ್ಲ ಸೋಲಿಸಿ ದುರ್ಯೋಧನನನ್ನು ಸೆರೆಹಿಡಿದುಕೊಂಡು ಒಯ್ದನು. ಈ ಸುದ್ದಿಯು ಪಾಂಡವರಿಗೆ ತಿಳಿಯಲು ಭೀಮಸೇನನು "ಆಸ್ಮಾಭಿರ್ಯದನುಷ್ಠೇಯಂ ಗಂಧರ್ವೈಸ್ತದನುಷ್ಠಿತಂ"—ನಾವು ಮಾಡಬೇಕಾದುದನ್ನು ಗಂಧರ್ವರು ಮಾಡಿದರು ಎಂದು ಸಂತೋಷಬಟ್ಟನು. ಆದರೆ ಇದು ಧರ್ಮರಾಜನ ಮನಸ್ಸಿಗೆ ಬರಲಿಲ್ಲ. ಮತ್ತು ಆತನು ಅರ್ಜುನನನ್ನು ಕರೆದು—ತಮ್ಮಾ, ದುರ್ಯೋಧನನನ್ನು ಬಿಡಿಸಿಕೊಂಡು ಬಾ ಎಂದು ಅಪ್ಪಣೆ ಮಾಡಿ

ದನು; ಮತ್ತು ತಮ್ಮಂದಿರನ್ನು ಕುರಿತು—ನಮ್ಮ ನಮ್ಮೊಳಗೆ ಕಲಹವಿದ್ದಾಗ ನಾವು ಐವರು, ಅವರು ನೂರುಜನರು; ಆದರೆ ಮೂರನೆಯವರಿಂದ ಕೇಡು ಒದಗಿದಾಗ ನಾವು ನೂರ-ಐದು ಜನರು;—(ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಂ) ಪರರು ನಮ್ಮವರಲ್ಲಿ ಯಾರಿಗೆ ಅಪಮಾನ ಮಾಡಿದರೂ ಅದು ನಮ್ಮೆಲ್ಲರಿಗೂ ಆಯಿತೆಂದು ತಿಳಿಯಬೇಕು, ಎಂದು ಹೇಳಿದನು. ಸತ್ಯನಿಷ್ಠನೂ ಉದಾರಮನಸ್ಕನೂ ಆದ ಅಣ್ಣನ ಉಪದೇಶವು ಸರಿಯಾದುದೆಂದು ತಿಳಿದು ಅರ್ಜುನನು ಶಸ್ತ್ರಪಾಣಿಯಾಗಿ ಹೊರಟು ದುರ್ಯೋಧನನನ್ನು ಬಿಡಿಸಿಕೊಂಡು ಬಂದನು.

---

ಸೌಜನ್ಯ.

## ೪೭. ೪ನೆಯ ಹೇನ್ರಿಯೂ ತಿರಿಕನೂ.

ಒಂದಾನೊಂದು ದಿವಸ ಫ್ರಾನ್ಸದ ಅರಸನಾದ ೪ನೆಯ ಹೇನ್ರಿಯು ತನ್ನ ಸಭಾಸದರೊಡನೆ ಪಾರಿಸಪಟ್ಟಣದ ರಾಜಮಾರ್ಗವನ್ನು ಹಿಡಿದು ಹೋಗುತ್ತಿದ್ದನು. ಒಬ್ಬ ತಿರಿಕನು ಅರಸನನ್ನು ಕಂಡು ಟೊಪ್ಪಿಗೆಯನ್ನೆತ್ತಿ ತಲೆ ವಾಗಿಸಿ ಆತನಿಗೆ 'ಸಲಾಮು' ಮಾಡಿದನು. ಅರಸನೂ ಮರಳಿ ಆತನಿಗೆ ಅದ ರಂತೆಯೆ 'ಸಲಾಮು' ಮಾಡಿದನು. ಸಭಾಸದರು ಅದನ್ನು ನೋಡಿದರು. ಆದರೆ ತಿರಿಕನಿಗೆ ಹಾಗೆ ಮರಳಿ ಸಲಾಮು ಮಾಡುವದು ಅನುಚಿತವೆಂದು ಅವರು ಬಗೆದರು. ಆಗ ಒಬ್ಬ ಸಭಾಸದನು–ತಿರಿಕನಿಗೆ ಹಾಗೆ 'ಸಲಾಮು' ಮಾಡುವುದು ತಕ್ಕುದಲ್ಲ ಎಂದು ಮೆಲ್ಲನೆ ನುಡಿದನು. ಆಗ ಹೇನ್ರಿಯು ನಕ್ಕು—'ನನ್ನ ರಾಜ್ಯದೊಳಗಿನ ಒಬ್ಬ ತಿರಿಕನಿಗಿಂತ ಸೌಜನ್ಯದಲ್ಲಿ ಕಡಿಮೆ ಯವನಾಗಲು ನಾನು ಬಯಸುವುದಿಲ್ಲ.' ಎಂದು ಹೇಳಿದನು.

ಒಬ್ಬ ಕವಿ ಹೇಳುವುದೇನೆಂದರೆ—ಸಜ್ಜನರು ಹೆಚ್ಚಿಗೆ ಉನ್ನತ(ಎತ್ತರ) ರಾಗಬೇಕೆಂಬ ಅಭಿಲಾಷೆಯಿಂದ ಬಾಗುತ್ತಾರೆ. (ನಮಂತಿ ಸಂತಸ್ತ್ರೈಲೋಕ್ಯಾದಪಿ ಲಬ್ಧುಂ ಸಮುನ್ನತಿಂ) ಚಾಣಕ್ಯನು-ವಿದ್ಯೆಯು ವಿನಯವನ್ನುಂಟು ಮಾಡುತ್ತದೆ. (ವಿದ್ಯಾ ದದಾತಿ ವಿನಯಂ) ಎಂದು ಹೇಳಿರುವನು.

---

ಏಕಲಕ್ಷ್ಯ.

## ೪೮. ಖಲೀಫನಾದ ಉಮರನು.

ಮಹಾತ್ಮನಾದ ಉಮರನು ಖಲೀಫನಾಗಿದ್ದಾಗ ಇಜಿಪ್ತ ದೇಶವು ಗೆಲ್ಲಲ್ಪಟ್ಟಿತು. ಆಗ ಅಲೆಕ್‌ಜಾಂಡ್ರಿಯದ ಸುಪ್ರಸಿದ್ಧವಾದ ಪುಸ್ತಕಾಲಯವು ಉಮರನ ಅಪ್ಪಣೆಯಿಂದ ಸುಡಲ್ಪಟ್ಟಿತೆಂದೂ, ಅದರಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚಿಗೆ ಪುಸ್ತಕಗಳಿದ್ದುವೆಂದೂ ಹೇಳುತ್ತಾರೆ. ಸುಡಲಪ್ಪಣೆ ಕೊಡುವಾಗ ಆತನು ಹೇಳಿದುದೇನೆಂದರೆ—"ಈ ಎಲ್ಲ ಪುಸ್ತಕಗಳಲ್ಲಿರುವ ವಿಷಯವು ಕುರಾಣದಲ್ಲಿದ್ದರೆ ಈ ಪುಸ್ತಕಗಳಿಂದೇನು ಪ್ರಯೋಜನ? ಕುರಾಣದಿಂದಲೇ ಕೆಲಸವಾಗುವುದು. ಇನ್ನು ಕುರಾಣದಲ್ಲಿಲ್ಲದ ಇಲ್ಲವೆ ಅದಕ್ಕೆ ವಿರುದ್ಧವಾದ ವಿಷಯವು ಈ ಪುಸ್ತಕಗಳಲ್ಲಿದ್ದರೆ ಇವುಗಳನ್ನು ಇಡುವುದು ಉಚಿತವಲ್ಲ. ಎಂದ ಬಳಿಕ ಈ ಪುಸ್ತಕಗಳು ನಿಷ್ಪ್ರಯೋಜನವಾಗಿ ಇಲ್ಲವೆ ಹಾನಿಕರವಾಗಿ ಇರುವುವೆಂದಂತಾಯಿತು. ಆದುದರಿಂದ ಇವುಗಳನ್ನು ಸುಟ್ಟುಬಿಡುವುದೇ ಮೇಲು." ಕೆಲವು ಜನ ಐತಿಹಾಸಿಕರು ಆ ಪುಸ್ತಕಾಲಯವು ಮೊದಲೇ ಸುಟ್ಟುಹೋಗಿದ್ದಿತೆಂದೂ ಉಮರನು, ವಿದ್ಯಾಪಕ್ಷಪಾತಿಯಾದುದರಿಂದ ಆ ತರದ ಅಪ್ಪಣೆಯನ್ನು ಮಾಡಿರಲಿಲ್ಲವೆಂದೂ ಪ್ರಮಾಣಗಳಿಂದ ಸಿದ್ಧಪಡಿಸಲು ಪ್ರಯತ್ನಿಸಿರುವರು. ಒಂದುವೇಳೆ ಆ ತರದಿಂದ ನಡೆದಿದ್ದರೂ ನಡೆದಿರಬಹುದು. ಏಕೆಂದರೆ, ಭಕ್ತಿಮಾರ್ಗದಲ್ಲಿದ್ದ ಜನರು ವ್ಯರ್ಥಪಾಂಡಿತ್ಯದ ಮೇಲೆ ಸ್ವಾಭಾವಿಕವಾಗಿ ಅನಾದರವುಳ್ಳಂತೆ ಕಂಡುಬರುತ್ತಾರೆ. ಶ್ರೀಮಚ್ಛಂಕರಾಚಾರ್ಯರು—"ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನಕೌಶಲಂ। ವೈದುಷ್ಯಂ ವಿದುಷಾಂತದ್ವತ್ ಭುಕ್ತಯೇ ನ ತು ಮುಕ್ತಯೇ॥" ವಾಕ್ಯ, ಶಬ್ದ ಇವುಗಳ ಆಡಂಬರ, ಶಾಸ್ತ್ರವ್ಯಾಖ್ಯಾನಚಾತುರ್ಯ, ವಿದ್ವತ್ತೆ ಇವು ಇಹಲೋಕಸುಖಕ್ಕೆ ಹೊರತು ಮೋಕ್ಷಕ್ಕೆ ಕಾರಣವಾಗಲಾರವು ಎಂದು ಹೇಳಿರುತ್ತಾರೆ. ಅರಸನಾದವನು ಪುಸ್ತಕಾಲಯವನ್ನು ಸುಡಹೇಳುವುದು ಅಯೋಗ್ಯವೆನಿಸಿದರೂ ದೇವರಲ್ಲಿ ಏಕನಿಷ್ಠೆಯುಳ್ಳ ಸರಲಮನಸ್ಸಿನ ಪ್ರಾರಂಭಕಾಲದ ಮುಸಲ್ಮಾನ ವೀರರು ಹೊಸದೇಶದಲ್ಲಿ ಸ್ವಧರ್ಮದ ಧ್ವಜವನ್ನು ಊರುವ ಉದ್ದೇಶದಿಂದ ಈ ತರದ ಅಪ್ಪಣೆಯನ್ನು ಮಾಡುವುದೂ ಅಷ್ಟೊಂದು ಅಸಂಭವವೆಂದು ತೋರುವುದಿಲ್ಲ.

———————

ಅತಿಥಿಸತ್ಕಾರ.

## ೪೯. ರಂತಿದೇವ

ಭರದ್ವಾಜನ ವಂಶದಲ್ಲಿ ಆಗಿಹೋದ ರಂತಿದೇವನು ಅತಿಥಿಸತ್ಕಾರದಲ್ಲಿ ಮೇಲ್ತರದ ದೃಷ್ಟಾಂತವಾಗಿರುವನು. ಆತನು ತಾನಾಗಿ ದೊರೆತುದರಲ್ಲಿ ಸಂತುಷ್ಟನಾಗಿ ಅದರಲ್ಲಿಯೇ ಅತಿಥಿಗಳನ್ನು ಸತ್ಕರಿಸುವನು. ಒಮ್ಮೆ ಆತನ ಮನೆಯಲ್ಲಿ ಏನೂ ಇಲ್ಲದಿರಲು, ಮನೆಯವರೆಲ್ಲರೂ ನಾಲ್ವತ್ತೆಂಟು ದಿವಸ ಉಪವಾಸ ಮಾಡಿದರು. ನಾಲ್ವತ್ತೊಂಬತ್ತನೆಯ ದಿವಸ ಯಾರೋ ಅನ್ನ ವನ್ನು ಒದಗಿಸಿ ಕೊಡಲು ಮನೆಯವರೆಲ್ಲರೂ ಸಂತೋಷಬಟ್ಟು ಊಟಕ್ಕೆ ಕುಳಿತುಕೊಳ್ಳುವ ಹೊತ್ತಿಗೆ ಒಬ್ಬ ಅತಿಥಿಯು ಮನೆಯ ಬಾಗಿಲಿಗೆ ಬಂದನು. ರಂತಿದೇವನು ಅತಿಥಿಯನ್ನು ನೋಡಿದೊಡನೆ ಪರಮಾದರದಿಂದ ಆತನನ್ನು ಬರಮಾಡಿ ಸತ್ಕರಿಸಿ ಮನೆಯಲ್ಲಿದ್ದ ಅನ್ನದಿಂದ ಆತನನ್ನು ತೃಪ್ತಿಗೊಳಿಸಿದನು. ಈ ಅತಿಥಿಯು ಹೊರಗೆ ಹೋಗುವಷ್ಟರಲ್ಲಿ ಮತ್ತೊಬ್ಬ ಅತಿಥಿಯು ಬಂದನು. ಆತನನ್ನೂ ತೃಪ್ತಿಬಡಿಸಿ ಕಳಿಸುವ ಹೊತ್ತಿಗೆ ಇನ್ನೊಬ್ಬ ಅತಿಥಿಯು ಹಸಿದ ಹಲವು ನಾಯಿಗಳನ್ನು ಹಿಡಿದುಕೊಂಡು ಬಂದನು. ಹಸಿದು ಬಳಲಿಬಂದ ಆ ಮನುಷ್ಯನಿಗೂ ಅವನ ಸಂಗಡ ಬಂದ ನಾಯಿಗಳಿಗೂ ಮನೆಯಲ್ಲಿದ್ದ ಅನ್ನವನ್ನೆಲ್ಲ ಕೊಟ್ಟುಬಿಟ್ಟನು. ಮನೆಯವರಿಗೆ ಅನ್ನವೇ ಇಲ್ಲ! ಸ್ವಲ್ಪ ನೀರು ಮಾತ್ರ ಮನೆಯಲ್ಲಿ ಉಳಿದಿದ್ದುವು. ನೀರನ್ನಾದರೂ ಕುಡಿದಿರಬೇಕೆಂದು ಆಲೋಚಿಸುತ್ತಿರುವಾಗ ಬೇರೊಬ್ಬ ಅತಿಥಿಯು ನೀರಡಿಸಿ ಗಂಟಲೊಣಗಿದವ ನಾಗಿ ರಂತಿದೇವನ ಮನೆಗೆ ಬಂದನು. ರಂತಿದೇವನು ಆ ನೀರನ್ನೆಲ್ಲ ಆ ಅತಿ ಥಿಗೆ ಕೊಟ್ಟು ಸಮಾಧಾನಪಡಿಸಿದನು. ಮನೆಯವರೆಲ್ಲ ಹಸಿದು ಕಂಗೆಟ್ಟು ದೀನಮುದ್ರೆಯಿಂದ ತನ್ನ ಕಡೆಗೆ ನೋಡುತ್ತ ನಿಂತಿದ್ದಾರೆ; ತನಗೂ ಶಕ್ತಿ ಕುಂದಿ ಒಣಗಿದ ಎಲುವಿನ ಹಂದರವು ಮಾತ್ರ ಉಳಿದಿದೆ; ಈ ಸ್ಥಿತಿಯಲ್ಲಿ ಪರಮೇಶ್ವರನನ್ನು ಕುರಿತು—ಪ್ರಭೂ, ನೀನು ನನಗೆ ಅಣಿಮಾದಿಸಿದ್ಧಿಗಳನ್ನೂ ಕೊಡಬೇಡ, ಬಹಳವೇಕೆ? ಮೋಕ್ಷವನ್ನೂ ಕೊಡಬೇಡ; ಆದರೆ ಮನೆಗೆ ಬಂದ ಅತಿಥಿಗಳನ್ನು ಹಾಗೆಯೆ ಕಳಿಸದಷ್ಟು ಸುಸ್ಥಿತಿಯನ್ನು ಮಾತ್ರ ಕೊಡು; ಪ್ರಾಣಿಗಳ ದುಃಖವನ್ನು ನಾನು ನೋಡಲಾರೆನು; ನಾನು ಸರ್ವಪ್ರಾಣಿ ಗಳಲ್ಲಿ ಅಂತರ್ಯಾಮಿಯಾಗಿದ್ದು ಅವುಗಳ ದುಃಖವನ್ನು ಅನುಭವಿಸುವಂತೆ ಮಾಡು; ಭಕ್ತವತ್ಸಲಾ, ಇಂದು ನನ್ನ ಮನೆಗೆ ಹಸಿದು ಬಳಲಿ ಬಂದ ಅತಿಥಿ

ಗಳಿಗೆ ಅನ್ನೋದಕಗಳನ್ನು ಕೊಟ್ಟು ತೃಪ್ತಿಗೊಳಿಸಿದ ಭಾಗ್ಯವನ್ನು ನನಗೆ ನೀನು ದಯಪಾಲಿಸಿದುದರಿಂದ ನನ್ನ ಹಸಿವೆ, ನೀರಡಿಕೆಗಳು ಹರಿದು ಹೋದುವು. ನನ್ನ ಆಧಿವ್ಯಾಧಿಗಳೂ, ದೈನ್ಯಶೋಕಗಳೂ ಬಯಲಾಗಿ ಹೋದುವು ಎಂದು ಆತನ ಉಪಕಾರವನ್ನು ಕೊಂಡಾಡಿದನು. ರಂತಿದೇವನು ಈ ಪರೀಕ್ಷೆಯಲ್ಲಿ ಮೋಕ್ಷಕ್ಕೆ ಅರ್ಹನೆಂದು ಕಂಡುಬಂದುದರಿಂದ ಪರಮೇಶ್ವರನು ಆತನಿಗೆ ಮೋಕ್ಷವನ್ನು ದಯಪಾಲಿಸಿದನು.

---

ಬೊಕ್ಕಸದೊಳಗಿನ ಹಣವು ಪ್ರಜೆಗಳದು.

## ೫೦. ನಾಸೀರ್ ಉದ್ದೀನ್.

ದಿಲ್ಲಿಯ ಪಠಾಣವಂಶದ ಚಕ್ರವರ್ತಿಯಾದ ನಾಸೀರ್ ಉದ್ದೀನನ ಮಾದರಿಯು ಮೇಲ್ತರಗತಿಯದು. ಆತನು ತನ್ನ ಕೈಯಿಂದ ಟೊಪ್ಪಿಗೆಗಳನ್ನು ಹೆಣೆದು ಅವುಗಳ ಮಾರಾಟದಿಂದ ಬಂದ ಹಣದಿಂದ ತನ್ನ ಊಟ, ಉಡಿಗೆಗಳ ವೆಚ್ಚವನ್ನು ಸಾಗಿಸುತ್ತಿದ್ದನು. ಬೊಕ್ಕಸದಲ್ಲಿದ್ದ ಒಂದು ದುಡ್ಡನ್ನಾದರೂ ತನಗಾಗಿ ಉಪಯೋಗಿಸಿಕೊಳ್ಳುತ್ತಿರಲಿಲ್ಲ.

---

ನಂಬಿಗೆಯ ದ್ವಾರಪಾಲಕನು

## ೫೧. ಶಹ ಅಬ್ಬಾಸನ ಕಥೆ.

ಇರಾಣದ ಬಾದಶಹನಾದ ಶಹ ಅಬ್ಬಾಸನು ಒಂದಾನೊಂದು ದಿವಸ ತನ್ನ ಒಬ್ಬ ಪ್ರೀತಿಯ ಸರದಾರನ ಮನೆಗೆ ಭೋಜನಕ್ಕೆ ಹೋದಾಗ ಮಿತಿಮೀರಿ ಸೆರೆ ಕುಡಿದನು. ಮನೆಯ ಯಜಮಾನನೂ, ಬೇರೆ ಜನರೂ ಇದೇ ಮೇರೆಗೆ ಅಳತೆದಪ್ಪಿ ಕುಡಿದುದರಿಂದ ನಿಶ್ಚೇಷ್ಟರಾಗಿದ್ದರು. ಈ ಸ್ಥಿತಿಯಲ್ಲಿಯೇ ಅಬ್ಬಾಸನು ಜೋಲಿ ಹೊಡೆಯುತ್ತ ಆ ಸರದಾರನ ಮನೆಯ ಅಂತಃಪುರದ ಬಾಗಿಲ ಬಳಿಗೆ ಬಂದನು. ದ್ವಾರಪಾಲಕನು ಅಂತಃಪುರದ ಬಾಗಿಲನ್ನು ಇಕ್ಕಿ ನಡುವೆ ನಿಂತನು. ಆತನನ್ನು ನೂಕಿ ಸರಿಸದೆ ಒಳಗೆ ಹೋಗುವುದಕ್ಕೆ ಬರುವಂತೆ ಇರಲಿಲ್ಲ. ಅಬ್ಬಾಸನು ಆ ಕಾವಲುಗಾರನಿಗೆ ದಾರಿಯ ಬಿಡು, ಇಲ್ಲವಾದರೆ ನಿನ್ನನ್ನು ಕಡಿದು ಚೆಲ್ಲುವೆನು ಎಂದು ಹೇಳಿದನು. ಆಗ ಆ ಕಾವಲುಗಾರನು ತನ್ನ ತಲೆಯನ್ನು ಮುಂದೆ ಮಾಡಿ—ಹಾಗೆ ಮಾಡಬೇಕು; ತಾವು ನನಗೂ ಸಮಗ್ರದೇಶಕ್ಕೂ ಒಡೆಯರು; ತಾವು ಯಾವ ಅವಸ್ಥೆಯಲ್ಲಿದ್ದರೂ

ತಮ್ಮ ಮೇಲೆ ಕೈಮಾಡುವುದು ಉಚಿತವಲ್ಲ. ಆದರೆ ನಾನು ಜೀವಂತನಾಗಿರುವ ವರೆಗೆ ನನ್ನ ಒಡೆಯನ ಅಂತಃಪುರದಲ್ಲಿ ಪರಪುರುಷನನ್ನು ಎಂದೂ ಸೇರಗೊಡಲಾರೆನು. ತಾವು ಪುರುಷರಿಗೆ ರಾಜರು; ಅಂತಃಪುರದೊಳಗಿನ ಸ್ತ್ರೀಯರಿಗೆ ರಾಜರಲ್ಲ. ಅವರು ಅಂತಃಪುರದಲ್ಲಿ ಪೂರ್ಣ ಸ್ವತಂತ್ರರು. ಆದುದರಿಂದ ನಾನು ಹೇಳುವುದೇನೆಂದರೆ—ತಾವು ನನ್ನನ್ನು ಕೊಂದು ಕೂಡ ಪರರ ಅಂತಃಪುರದಲ್ಲಿ ಒಳಸೇರುವುದು ಒಳ್ಳೆಯದಲ್ಲ. ಏಕೆಂದರೆ, ತೇಜಸ್ವಿನಿಯರಾದ ಇರಾಣಿ ಸ್ತ್ರೀಯರು ಪರಪುರುಷರೆಂದು ತಿಳಿದು ತಮ್ಮ ಮೇಲೆ ಶಸ್ತ್ರವನ್ನೆತ್ತದೆ ಬಿಡಲಾರರು. ಅಲ್ಲಿ ರಾಜರೆಂಬ ಮನ್ನಣೆ ನಿಮಗೆ ದೊರೆಯಲಾರದು ಎಂದು ಹೇಳಿದನು. ಅಬ್ಬಾಸ ಶಹನ ನಿಶೆ ಸ್ವಲ್ಪ ಇಳಿಯಿತು. ಆಗ ಅವನು ಸುಮ್ಮನೆ ತನ್ನ ಮನೆಗೆ ಹೊರಟುಹೋದನು.

ಮರುದಿವಸ ಆ ಸರದಾರನು ಆ ದಿನ ನಡೆದ ಸಮಾಚಾರವನ್ನೆಲ್ಲ ಕೇಳಿ ಅಬ್ಬಾಸಶಹನ ಬಳಿಗೆ ಬಂದು—ಮಹಾರಾಜರೇ, ತಾವು ನನ್ನ ಮನೆಯಲ್ಲಿ ಬೇಕಾದಲ್ಲಿ ಹೋಗಬಹುದಾಗಿದ್ದಿತು. ದ್ವಾರಪಾಲಕನು ಮೂರ್ಖನು; ಅವನ ತಪ್ಪಿಗಾಗಿ ಕೋಪಗೊಳ್ಳದೆ ನನ್ನನ್ನು ಕ್ಷಮಿಸಿರಿ. ಆ ಮನುಷ್ಯನನ್ನು ನಾನು ಕೆಲಸದಿಂದ ಬಿಡುಗಡೆ ಮಾಡಿದ್ದೇನೆ ಎಂದು ಹೇಳಿದನು. ಆಗ ಅಬ್ಬಾಸ ಶಹನು ನೀನಾಗಿಯೇ ಆ ಮನುಷ್ಯನನ್ನು ಈ ಮೊದಲೇ ಬಿಟ್ಟಿರುವುದನ್ನು ಕೇಳಿ ನನಗೆ ಬಹಳ ಸಂತೋಷ. ಆ ವಿಷಯಕ್ಕೆ ನಿನ್ನನ್ನು ಕೇಳಿಕೊಳ್ಳುವ ಹೊತ್ತೇ ಬರಲಿಲ್ಲ. ಈವೊತ್ತಿನಿಂದ ನಾನು ಆತನನ್ನು ನನ್ನ ಅಂಗರಕ್ಷಕ ಸೈನ್ಯದ ಸರದಾರನನ್ನಾಗಿ ಮಾಡುತ್ತೇನೆ; ನನಗೆ ಮಾತೃಸಮಾನರಾದ ನಿನ್ನ ಅಂತಃಪುರಸ್ತ್ರೀಯರ ಬಳಿಯಲ್ಲಿ ನನ್ನ ಉನ್ಮಾದಾವಸ್ಥೆಯಲ್ಲಿ ಜರುಗಿದ ಅಸಭ್ಯತನದ ನಡತೆಗಾಗಿ ಅವರ ಕ್ಷಮೆಯನ್ನು ಬೇಡಿಕೊಳ್ಳುತ್ತೇನೆ. ಈ ಮಾತನ್ನು ಅವರಿಗೆ ತಿಳಿಸು ಎಂದು ಹೇಳಿದನು. ದ್ವಾರಪಾಲಕನು ಅಂಗರಕ್ಷಕ ಸೈನ್ಯದ ಸರದಾರನಾದನು.

---

ಪಿತೃಋಣ.

## ೫೨. ಶ್ರೀದೇವೇಂದ್ರನಾಥ ಠಾಕುರ.

ಕಲಕತ್ತೆಯಲ್ಲಿ ಶ್ರೀದ್ವಾರಕಾನಾಥ ಠಾಕುರ ಎಂಬ ಪ್ರಸಿದ್ಧ ಜಮೀನದಾರರು ಕೆಲವು ದಿವಸಗಳ ಪೂರ್ವದಲ್ಲಿ ಆಗಿಹೋದರು. ಸಾಯುವ ಕಾಲ

ದಲ್ಲಿ ಅವರಿಗೆ ಬಹಳ ಸಾಲವಿದ್ದಿತು. ಅಷ್ಟು ಸಾಲವನ್ನು ಅವರ ಹೊಲಗಳಿಂದಲ್ಲದೆ ಬೇರೆ ರೀತಿಯಿಂದ ತೀರಿಸಲಿಕ್ಕೆ ಬರುವಂತಿರಲಿಲ್ಲ. ಆದರೆ ಸಾವುಕಾರರು ಇಂಗ್ಲಿಶ್ ಕಾಯದೆಯ ಮೇರೆಗೆ ಅವರ ಜಹಗೀರಿಯ ಹೊಲವನ್ನು ಆಕ್ರಮಿಸುವುದಕ್ಕೆ ಬರುವಂತಿರಲಿಲ್ಲ. ಆದರೆ ತಂದೆಗೆ ಆಸ್ತಿಯು ಇರಲಿ, ಇಲ್ಲದಿರಲಿ, ಮಗನು ತಂದೆಯ ಸಾಲವನ್ನು ತೀರಿಸಲೇ ಬೇಕೆಂಬ ಭರತಖಂಡದ ಪ್ರಾಚೀನಕಾಲದ ಕಾಯದೆಗೆ ಮಾನಕೊಟ್ಟು ಶ್ರೀದ್ವಾರಕಾನಾಥರವರ ಸುಪುತ್ರರಾದ ಶ್ರೀದೇವೇಂದ್ರನಾಥ ಠಾಕುರರು ಆ ಸಾಲವನ್ನೆಲ್ಲ ತೀರಿಸುವುದಕ್ಕೆ ಸಿದ್ಧರಾದರು. ಅವರು ಸಾಲಕೊಟ್ಟ ಸಾವುಕಾರರನ್ನೆಲ್ಲ ಕರೆಯಿಸಿ ತಮ್ಮ ಎಲ್ಲ ಆಸ್ತಿಯ ಯಾದಿಯನ್ನು ಮಾಡಿ ಅವರ ಕೈಯಲ್ಲಿ ಕೊಟ್ಟು ನಿಮ್ಮ ಸಾಲವನ್ನು ಈ ಆಸ್ತಿಯಿಂದ ನಿಮ್ಮ ಮನಸ್ಸಿಗೆ ಬಂದ ಮೇರೆಗೆ ತೀರಿಸಿಕೊಳ್ಳಿರೆಂದು ಹೇಳಿದರು. ಅವರ ಈ ಸರಳ ವ್ಯವಹಾರವನ್ನು ನೋಡಿ ಸಾವುಕಾರರು ಅವರ ಆಸ್ತಿಗಳಲ್ಲಿ ಯಾವುವನ್ನೂ ಮಾರುವುದಕ್ಕೆ ಹೋಗಲಿಲ್ಲ. ಮತ್ತು ಆಸ್ತಿಯ ವ್ಯವಹಾರ ಮಾಡುವುದನ್ನೂ ದೇವೇಂದ್ರನಾಥರಿಗೇ ಒಪ್ಪಿಸಿದರು. ಆಗ ದೇವೇಂದ್ರನಾಥರು ಪ್ರತಿವರ್ಷ ಸಂಸಾರಕ್ಕೆ ಆವಶ್ಯಕವಾದ ಸ್ವಲ್ಪ ಹಣವನ್ನು ಮಾತ್ರ ಇಟ್ಟುಕೊಂಡು ಉಳಿದ ಹಣವನ್ನೆಲ್ಲ ಸಾವುಕಾರರಿಗೆ ಕೊಡುತ್ತ ಬಂದರು. ಕೆಲವು ವರ್ಷಗಳಲ್ಲಿ ಅವರ ಸಾಲವು ಮುಟ್ಟಿತು. ದೇವೇಂದ್ರನಾಥರ ಸುವ್ಯವಸ್ಥೆಯಿಂದ ಅವರ ಜಮೀನದಾರಿಯ ಆದಾಯವೂ ಬೆಳೆಯಿತು. ಮುಂದೆ ಅವರು ಒಂದು ಔಷಧಾಲಯಕ್ಕೆ ೧ಲಕ್ಷ ರೂಪಾಯಿಗಳನ್ನು ದಾನಮಾಡಿದರು. ಇವರ ತಂದೆ ಶ್ರೀದ್ವಾರಕಾನಾಥರು ಈ ಕಾರ್ಯಕ್ಕೋಸ್ಕರ ಇಷ್ಟು ಹಣವನ್ನು ಕೊಡುತ್ತೇವೆಂದು ವಚನಕೊಟ್ಟಿದ್ದರು; ಆದರೆ ಕೊಡುವುದಕ್ಕಾಗಿರಲಿಲ್ಲ. ಈ ಮೇರೆಗೆ ತಂದೆಯ ಋಣವನ್ನು ತೀರಿಸುವದಲ್ಲದೆ ಆತನ ವಚನ, ಇಚ್ಛೆಗಳನ್ನು ನಡೆಯಿಸಿ ಧನ್ಯನಾಗುವುದರಿಂದಲೇ ನಿಜವಾಗಿ ತಂದೆಯ ಶ್ರಾದ್ಧವನ್ನು ಮಾಡಿದಂತಾಗುವುದು. ದಿನಕರ್ಮದಲ್ಲಿ ನಾಲ್ಕು ದುಡ್ಡು ಹೆಚ್ಚಿಗೆ ವೆಚ್ಚ ಮಾಡಿಬಿಟ್ಟರೆ ಅದು ಭಕ್ತಿಶ್ರಾದ್ಧವಾಗಲಾರದು. ಶ್ರೀದೇವೇಂದ್ರನಾಥರು ಈ ತರದ ಸುಸ್ವಭಾವದಿಂದಲೂ, ತತ್ತ್ವಜ್ಞಾನ ಮೊದಲಾದ ಶಾಸ್ತ್ರಗಳಲ್ಲಿ ಬಹಳ ಉನ್ನತಿಯನ್ನು ಹೊಂದಿದುದರಿಂದಲೂ "ಮಹರ್ಷಿ ದೇವೇಂದ್ರನಾಥ"ರೆಂದು ಕೀರ್ತಿಯನ್ನು ಪಡೆದರು. " ಪುತ್ರೇ ಯಶಸಿ ತೋಯೇ ಚ ನರಾಣಾಂ ಪುಣ್ಯ

ಲಕ್ಷಣಂ''—'ಪುತ್ರ, ಕೀರ್ತಿ, ಜಲ ಇವುಗಳಲ್ಲಿ ಮನುಷ್ಯರ ಪುಣ್ಯವು ಕಾಣ ಬರುವುದು.' ಎಂದು ಹಿರಿಯರು ಹೇಳುವಂತೆ ಪುಣ್ಯವಂತರಾದ ದೇವೇಂದ್ರ ನಾಥರಪರ ಮಕ್ಕಳೆಲ್ಲರೂ ವಿದ್ವಾಂಸರೂ ಸುಶೀಲರೂ ಸುಪ್ರಸಿದ್ಧರೂ ಆದರು.

---

ಶ್ರೇಷ್ಠದಾನ

## ೫೩. ಕಾಪೋತಿ.

ಭಾರತಯುದ್ಧವು ಮುಗಿದ ಬಳಿಕ ಧರ್ಮರಾಜನು ಬಂಧುವಧಪಾತಕ ದಿಂದ ಮುಕ್ತನಾಗಬೇಕೆಂದು ಅಶ್ವಮೇಧಯಜ್ಞವನ್ನು ಮಹಾವೈಭವದಿಂದ ಮಾಡಿದನು. ಆ ಯಜ್ಞದಲ್ಲಿ ಧರ್ಮರಾಜನು ಸರ್ವಸ್ವವನ್ನು ವೆಚ್ಚಮಾಡಿ ದನು. ಬ್ರಾಹ್ಮಣರಿಂದ ಮ್ಲೇಚ್ಛರವರೆಗೆ ಎಲ್ಲರಿಗೂ ಅವರವರ ಯೋಗ್ಯತೆ ಯಂತೆ ದಾನಮಾಡಿದನು. ಅನ್ನದಾನಕ್ಕೆ ಎಣೆಯೇ ಇಲ್ಲ. ಯಜ್ಞವು ಮುಗಿ ಯುತ್ತ ಬಂದಿತು. ಆಗ ಒಂದು ಚಮತ್ಕಾರದ ಸಂಗತಿ ನಡೆಯಿತು. ಯಜ್ಞಮಂಟಪಕ್ಕೆ ಒಂದು ಮುಂಗುಲಿ ಬಂದಿತು. ಅದರ ಅರ್ಧ ದೇಹವು ಬಂಗಾರದ್ದಿದ್ದಿತು; ಅದು—ಇಲ್ಲಿ ಇಷ್ಟೊಂದು ದೊಡ್ಡ ಯಜ್ಞವು ನಡೆದಿದ್ದರೂ ಇದು ಕುರುಕ್ಷೇತ್ರದಲ್ಲಿ ಉಂಛವೃತ್ತಿಯಿಂದ ಬದುಕುವ ಒಬ್ಬ ಬ್ರಾಹ್ಮಣನ ಹಿಟ್ಟಿನ ದಾನವನ್ನು ಸರಿಗಟ್ಟಲಾರದು ಎಂದು ಮನುಷ್ಯವಾಣಿಯಿಂದ ಮಾತಾ ಡಲಾರಂಭಿಸಿತು. ಆಗ ಎಲ್ಲರೂ ಆಶ್ಚರ್ಯಬಟ್ಟು ಕೇಳಲು ಮುಂಗುಲಿ ಹೇಳ ಲಾರಂಭಿಸಿತು:—ಕುರುಕ್ಷೇತ್ರದಲ್ಲಿ 'ಕಾಪೋತಿ' ಎಂಬ ಬ್ರಾಹ್ಮಣನು ವಾಸ ಮಾಡುತ್ತಿರುವನು. ಆತನ ಮನೆಯಲ್ಲಿ ಹೆಂಡತಿ, ಮಗ, ಸೊಸೆ ಹೀಗೆ ಇನ್ನು ಮೂವರು ಇರುವರು. ಹೊಲಗಳಲ್ಲಿ ಬಿದ್ದಿರುವ ಕಾಳುಗಳನ್ನು ಆರಿಸಿ ತಂದು ದಿವಸದಲ್ಲಿ ಒಂದೇ ಸಾರೆ ಊಟಮಾಡುವುದು ಅವರ ನಿಯಮವು. ಒಂದು ಸಾರೆ ಆ ನಾಡಿನಲ್ಲಿ ದುರ್ಭಿಕ್ಷವಾಯಿತು. ಆದುದರಿಂದ ಆ ಕುಟುಂಬವು ಕೆಲವು ದಿವಸ ಉಪವಾಸದಿಂದ ಕಾಲಕಳೆಯಬೇಕಾಯಿತು. ಕೊನೆಗೆ ಒಂದು ದಿವಸ ಬಹುಕಷ್ಟದಿಂದ ಧಾನ್ಯವನ್ನು ಸಂಪಾದಿಸಿ ಅದರಿಂದ ಆಹಾರವನ್ನು ಸಿದ್ಧ ಪಡಿಸಿ ಇನ್ನು ಊಟಮಾಡಬೇಕೆಂದಿದ್ದರು. ಅಷ್ಟರಲ್ಲಿ ಹಸಿವೆಯಿಂದ ಬಹಳ ವಾಗಿ ಬಳಲಿದ ಒಬ್ಬ ಅತಿಥಿ ಅವರ ಗುಡಿಸಲಿಗೆ ಬಂದನು. ಕಾಪೋತಿಯು ಆ ಅತಿಥಿ ಯನ್ನು ಕರೆದು ಸತ್ಕರಿಸಿ ತನ್ನ ಪಾಲಿನ ಅನ್ನವನ್ನು ಆತನಿಗೆ ಕೊಟ್ಟನು. ಅಷ್ಟು ಅನ್ನದಿಂದ ಅತಿಥಿಯು ತೃಪ್ತಿಯಾಗಲಿಲ್ಲ. ಆಗ ಆತನ ಮುದುಕಿಯಾದ ಹೆಂಡತಿ

ಹಸಿವೆಯಿಂದ ಕಂಗೆಟ್ಟರೂ ತನ್ನ ಪಾಲಿನ ಅನ್ನವನ್ನು ಅತಿಥಿಗೆ ಕೊಡಹೇಳಿ
ದಳು. ಕಾಪೋತಿಯು ಹೆಂಡತಿಯ ಅವಸ್ಥೆಯನ್ನು ಕಂಡು ಕೊಡಲಾರದೆ
ಹಿಂದೆ ಮುಂದೆ ನೋಡುತ್ತಿರಲು ಆಕೆ ಆಗ್ರಹದಿಂದ ಆ ಅನ್ನವನ್ನು ಅತಿಥಿಗೆ
ಕೊಡಿಸಿದಳು. ಆದರೂ ಅತಿಥಿಗೆ ಸಾಕಾಗಲಿಲ್ಲ. ಆಗ ಮಗನೂ ತನ್ನ ಪಾಲಿನ
ದನ್ನು ಅತಿಥಿಗೆ ಕೊಡಿಸಿದನು. ಅದರಿಂದಲೂ ಅತಿಥಿಯು ತೃಪ್ತಿಯಾಗಲಿಲ್ಲ.
ಕೊನೆಗೆ ಸೊಸೆಯೂ ತನ್ನ ಪಾಲನ್ನು ಕೊಡಹೇಳಿದಳು. ಆ ಹುಡುಗೆಯ
ಪಾಲಿನ ತುತ್ತನ್ನು ಅತಿಥಿಗೆ ಕೊಡುವುದು ಬ್ರಾಹ್ಮಣನಿಂದ ಆಗಲೊಲ್ಲದು.
ಆಗ ಆ ಹುಡಿಗೆ ಬಹು ವಿಧವಾಗಿ ಮಾವನನ್ನು ಬೇಡಿಕೊಂಡು ಆಗ್ರಹದಿಂದ
ತನ್ನ ಪಾಲನ್ನೂ ಅತಿಥಿಗೆ ಕೊಡಿಸಿದಳು. ಆಗ ಮಾತ್ರ ಅತಿಥಿ ತೃಪ್ತಿಹೊಂದಿ
ದನು. (ಈ ಅತಿಥಿಯು ಪ್ರತ್ಯಕ್ಷ ಯಮಧರ್ಮನೆಂದೂ, ಬ್ರಾಹ್ಮಣನ ಈ
ಧರ್ಮಾಚರಣೆಗೆ ಮೆಚ್ಚಿ ಆ ಕುಟುಂಬಕ್ಕೆ ಸ್ವರ್ಗವಾಸಸುಖವನ್ನು ಅನುಗ್ರಹಿ
ಸಿದನೆಂದೂ ಹೇಳಲ್ಪಟ್ಟಿದೆ.) ಮತ್ತೆ ಮುಂಗುಲಿ ಹೇಳುತ್ತದೆ—ಬಳಿಕ ನಾನು
ಬಿಲದಿಂದ ಹೊರಹೊರಟು ಬ್ರಾಹ್ಮಣನು ಅನ್ನದಾನ ಮಾಡಿದ ಸ್ಥಳದಲ್ಲಿ
ಉದುರಿದ ಹಿಟ್ಟಿನಲ್ಲಿ ಸ್ವಲ್ಪ ಹೊರಳಾಡಲು, ನನ್ನ ಅರ್ಧಾಂಗವು ಬಂಗಾರ
ದ್ದಾಯಿತು; ಇನ್ನುಳಿದ ಅರ್ಧಾಂಗವನ್ನು ಬಂಗಾರದ್ದನ್ನಾಗಿ ಮಾಡುವ
ಯಾವ ಯಜ್ಞವೂ ನನ್ನ ಕಣ್ಣಿಗೆ ಬಿದ್ದಿಲ್ಲ; ಈ ಅಶ್ವಮೇಧದಲ್ಲಿಯೂ ಆ
ಆ ಸಾಮರ್ಥ್ಯವಿರುವಂತೆ ಕಾಣಿಸಲಿಲ್ಲ; ಏಕೆಂದರೆ, ನನ್ನ ಈ ಮೈಯು ಚಿನ್ನ
ದ್ದಾಗಲಿಲ್ಲ. ಸದ್ವೃತ್ತಿಯಿಂದ ಸಂಪಾದಿಸಿ ಅತ್ಯಂತ ಸಂಕಟಕಾಲದಲ್ಲಿಯೂ
ಬಹಳ ಶಾಂತತನದಿಂದ, ಕರ್ತವ್ಯಬುದ್ಧಿಯಿಂದ, ಧರ್ಮವನ್ನು ಪಾಲಿಸುವುದ
ಕ್ಕೋಸ್ಕರ ಮಾಡಿದ ಆ ರೊಟ್ಟಿಯ ದಾನವನ್ನು ಕೋಟ್ಯವಧಿ ಧನವನ್ನು ವೆಚ್ಚ
ಮಾಡಿ ಮಹಾವೈಭವದಿಂದ ವಿಪುಲದಾನಗಳನ್ನೊಳಗೊಂಡ ಈ ಯಜ್ಞವು
ಸರಿಗಟ್ಟಲಾರದೆಂದು ನಾನು ಹೇಳಿದ ಮಾತಿನ ರಹಸ್ಯವು ನಿಮಗೆ ವಿದಿತ
ವಾಯಿತೇ ಎಂದು ಕೇಳಿ ಆ ಮುಂಗುಲಿ ಅದೃಶ್ಯವಾಗಿ ಹೊರಟುಹೋಯಿತು.

---

ಕರ್ತವ್ಯನಿಷ್ಠೆ.

## ೩೪. ಬಿಶಪ್ ವುಯಿಲ್ಯಮ್.

ಈ ಕಾಲದಲ್ಲಿ ಪುರೋಹಿತರು, ಪಾದ್ರಿಗಳು, ಮುಲ್ಲಾಗಳು ಇವರನ್ನು
ಹಲವರು ಒಳ್ಳೆಯ ದೃಷ್ಟಿಯಿಂದ ನೋಡುವುದಿಲ್ಲ. ಆದರೆ ಇವರೇ ಒಮ್ಮೊಮ್ಮೆ

ಸ್ಪಷ್ಟವಾದಿಗಳಾಗಿ ಜನರನ್ನು ದಾರಿಗೆ ತರುವರು. ಆದುದರಿಂದ ಆ ಜನರು ಸ್ಪಷ್ಟವಾದಿಗಳಾಗುವಂತೆ ಪೂರ್ವಕಾಲದ ತೇಜಸ್ಸನ್ನು ಹೊಂದಲಿ, ಗೃಹಸ್ಥರು ಅವರಿಗೆ ಅಂಜಿ ನಡೆಯಲಿ.

ಡೆನ್ಮಾರ್ಕದ ಅರಸನಾದ ಸೋಯೆಂಡ್ ಎಂಬವನು ಕ್ರಿಸ್ತಿಧರ್ಮವನ್ನು ಸ್ವೀಕರಿಸಿದನು. ಆದರೆ ಆತನ ಮನಸ್ಸು ತಿರುಗಿರಲಿಲ್ಲ. ಆತನು ಕ್ರಿಸ್ತಿ ಪಾದ್ರಿಗಳಿಗೆ—ನೀವು ನನ್ನ ಸ್ವೇಚ್ಛಾಚರಣೆಗೆ ಸ್ವಲ್ಪವಾದರೂ ಅಡ್ಡ ಬಂದರೆ, ನಾನು ರಾಜ್ಯದೊಳಗಿನ ಅರ್ಧದಷ್ಟು ಪ್ರಜೆಗಳೊಡನೆ ಕ್ರಿಸ್ತಿಧರ್ಮವನ್ನು ಬಿಟ್ಟು ಮತ್ತೆ 'ಥರ' ದೇವರ ಪೂಜೆಯನ್ನು ಆರಂಭಿಸುವೆನು; ಮತ್ತು ಕ್ರಿಸ್ತಿಧರ್ಮವನ್ನು ಬಿಡದ ಉಳಿದ ಅರ್ಧ ಪ್ರಜೆಗಳನ್ನು ನಾಶಗೊಳಿಸುವೆನು ಎಂದು ಬೆದರಿಸುತ್ತಿದ್ದನು. ಒಂದು ದಿವಸ ಸೋಯೆಂಡ್ ರಾಜನು ಒಂದು ಸಣ್ಣ ಅಪರಾಧಕ್ಕಾಗಿ ಒಬ್ಬ ಡೇನ್ ಸದ್ಗೃಹಸ್ಥನಿಗೆ ಮರಣಶಿಕ್ಷೆಯನ್ನು ವಿಧಿಸಿದನು. ತರುವಾಯ ಒಂದು ದಿನ ಆತನು 'ರಸಕಿಲ್ಡ್ ಕ್ಯಾಥಿಡ್ರಲ್' ಚರ್ಚಿನೊಳಗೆ ಪ್ರವೇಶಿಸುತ್ತಿದ್ದನು. ಅಷ್ಟರಲ್ಲಿ ಬಿಶಪ್ ವೃಯಿಲ್ಯಮನು ಕೈಯೊಳಗಿನ ಕೋಲನ್ನು ಹಿಡಿದು ಆತನ ದಾರಿಯನ್ನು ಕಟ್ಟಿ, ಬಾಗಿಲಲ್ಲಿ ನಿಂತು—ಇಲ್ಲಿ ತಾಳ್ಮೆಯುಳ್ಳವರೂ, ಮಾಡಿದ ತಪ್ಪಿಗೆ ಪಶ್ಚಾತ್ತಾಪಬಡುವವರೂ ಆದ ಜನರು ಸರ್ವಶಕ್ತಿಸಂಪನ್ನನಾದ ಪರಮೇಶ್ವರನನ್ನು ಭಜಿಸುವುದಕ್ಕೆ ಬರುವರು. ಕ್ರೂರರೂ, ಅವಿಚಾರಿಗಳೂ ಕೊಲೆಗಾರರೂ ಇಲ್ಲಿ ಪ್ರವೇಶಿಸಕೂಡದು ಎಂದು ಹೇಳಿದನು. ಕಲ್ಪನೆಯಲ್ಲಿಲ್ಲದ ಈ ಅಪಮಾನವು ಅರಸನಿಗೆ ಆದುದಕ್ಕೆ ಅವನ ಅನುಚರರು ಸಂತಾಪಗೊಂಡು ಯುದ್ಧದ ಕೊಡಲಿಯನ್ನೆತ್ತಿದರು; ಅರಸನು ಸೊಂಟದಲ್ಲಿ ತಗುಲಿಸಿಕೊಂಡ ಕತ್ತಿಗೆ ಕೈಚಾಚಿದನು; ಬಿಶಪ್ ವೃಯಿಲ್ಯಮನು ಮೊದಲಿನಂತೆ ಕದಲದೆ ಬಾಗಿಲನ್ನು ಕಟ್ಟಿ ನಿಂತು—ಬೇಕಾದರೆ ನನ್ನ ತಲೆಯನ್ನು ಕಡಿದು ಚರ್ಚಿನಲ್ಲಿ ಪ್ರವೇಶಿಸು; ನಾನು ಜೀವಂತನಾಗಿರುವ ವರೆಗೆ ನಿಮ್ಮಂತಹರಿಂದ ಪರಮೇಶ್ವರನ ಆಲಯವನ್ನು ಅಶುದ್ಧ ಮಾಡಗೊಡಲಾರೆನು, ಎಂದು ಹೇಳಿದನು. ಈ ಅರಸನು ರಣರಂಗದಲ್ಲಿ ಮದವೇರಿದ ಸಶಸ್ತ್ರವೀರರ ಅತ್ಯಂತ ಧೈರ್ಯ-ಸಾಹಸಗಳನ್ನು ಕಂಡವನು; ತಾನೂ ಜೀವದ ಮೇಲೆ ಸಂಕಟವಿರುವ ಹಲವು ಸಾಹಸದ ಕಾರ್ಯಗಳನ್ನು ಕೈಕೊಳ್ಳುವುದರಲ್ಲಿ ಹಿಂಜರಿಯದವನು. ತನ್ನ ಸಿಟ್ಟಿನ ನೋಟಕ್ಕೇ ಎಷ್ಟೋ

ಜನರು ಕೈಕಾಲುಗೆಡುವುದನ್ನು ಕಂಡವನು; ಆದರೆ ನಿಃಶಸ್ತ್ರರಾದವರ ಈ ತರದ ಸಂಪೂರ್ಣ ನಿರ್ಭೀಕತೆಯನ್ನು ಆತನು ಎಂದೂ ಕಂಡಿರಲಿಲ್ಲ; ಕೇಳಿರಲಿಲ್ಲ. ಉಚ್ಚ ಭಾವನೆಯಿಂದ ಪ್ರೇರಿತನಾಗಿ ಹೀಗೆ ಅಂಜಿಕೆಯಿಲ್ಲದೆ ಸಾವಿಗೆ ಮೈಯೊಡ್ಡಿದುದರ ಮಹತ್ತ್ವವು ಆತನ ವೀರಹೃದಯಕ್ಕೆ ಹೊಳೆಯದೆ ಇರಲಿಲ್ಲ. ಅವನು ಆ ಕ್ಷಣ ಅಲ್ಲಿಂದ ಅರಮನೆಗೆ ಸುಮ್ಮನೆ ಹೊರಟುಹೋದನು. ಅಲ್ಲಿ ರಾಜವೇಷವನ್ನೂ ಶಸ್ತ್ರಾಸ್ತ್ರಗಳನ್ನೂ ತೆಗೆದಿಟ್ಟು ತಲೆಯ ಮೇಲೆ ಏನೂ ಧರಿಸದೆ ಬರಿಗಾಲಿನಿಂದ ನಡೆಯುತ್ತ ಚರ್ಚಿಗೆ ಬಂದನು. ಬಾಗಿಲಲ್ಲಿ ಬಿಶಪ್ ವುಯಿಲ್ಯಮನಿಗೆ ತಲೆವಾಗಿ ತನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಬೇಕೆಂದು ಬೇಡಿಕೊಂಡನು. ಪಾದ್ರಿಯು ಆತನನ್ನು ಪಶ್ಚಾತ್ತಾಪ ಬಟ್ಟವರ ಸ್ಥಳದಲ್ಲಿ ಕುಳ್ಳಿರಿಸಿ ಕೆಲವೊಂದು ಜಪವನ್ನು ಮಾಡಹೇಳಿದನು. ಮೂರುದಿವಸ ನಿರಾಹಾರದಿಂದ ಜಪವನ್ನು ಮಾಡಿಸಿ ಬಳಿಕ ಬಿಶಪ್ಪನು ಆತನನ್ನು ಕ್ಷಮಿಸಿ ಎಲ್ಲರೊಡನೆ ಪ್ರಾರ್ಥನೆಗೆ ನಿಲ್ಲುವಂತೆ ಹೇಳಿದನು. ಮುಂದೆ ಬಿಶಪ್ ವುಯಿಲ್ಯಮನಿಗೂ ಅರಸನಿಗೂ ಪರಮಾವಧಿ ಸ್ನೇಹವಾಯಿತು. ಅವರು ತಮ್ಮಿಬ್ಬರಿಗೂ ಏಕಕಾಲದಲ್ಲಿ ಮರಣವೊದಗಲೆಂದು ದೇವರನ್ನು ಬೇಡಿಕೊಳ್ಳುತ್ತಿದ್ದರು. ಅದೇ ಮೇರೆಗೆ ಅವರಿಬ್ಬರೂ ಏಕಕಾಲದಲ್ಲಿ ಮರಣಹೊಂದಿದರು. ಅವರಿಬ್ಬರ ಗೋರಿಗಳು ಒಂದೇ ಚರ್ಚಿನಲ್ಲಿ ಸಮೀಪ ಸಮೀಪದಲ್ಲಿ ಕಟ್ಟಲ್ಪಟ್ಟಿರುವುವು.

---

ಮಾತಾಪಿತೃಭಕ್ತಿ.

## ೩೩. ಪುಂಡರೀಕ.

ಪುಂಡರೀಕನೆಂಬ ಒಬ್ಬ ಬ್ರಾಹ್ಮಣನು ಪಂಢರಪುರದಲ್ಲಿ ಆಗಿಹೋದನು. ಆತನು ಮೊದಲು ಬಹಳ ಒರಟನು. ತಾರುಣ್ಯಕ್ಕೆ ಬಂದ ಬಳಿಕ ಸ್ತ್ರೀಲಂಪಟನಾಗಿ ಮುದುಕರಾದ ತಾಯಿತಂದೆಗಳಿಗೆ ಅನಾದರ ಮಾಡುತ್ತ ಕೊನೆಗೆ ಅವರನ್ನು ಕಂಡರೆ ಸೇರದಂತಾದನು. ಆ ಮುದುಕರು ಮಗನ ಅನಾದರಣೆ ಅಪಮಾನಗಳಿಗೆ ಬೇಸತ್ತು ಕಾಶಿಗೆ ಹೋಗಿ ಕೆಲದಿನವಿದ್ದು ಪುತ್ರಮೋಹದಿಂದ ಮತ್ತೆ ತಮ್ಮ ಊರಿಗೆ ಬಂದರು. ಆಗ ಪುಂಡರೀಕನು ಹೆಂಡತಿಯ ಹೇಳಿಕೆಯಿಂದ ಆಕೆಯೊಡನೆ ತಾನು ಕಾಶಿಗೆ ಹೊರಟನು. ಆತನ ತಾಯಿತಂದೆಗಳೂ ನಿನ್ನ ಸಂಗಡ ಹೊರಡುವೆವೆನಲು ಆತನು ಅವರನ್ನು ತಿರಸ್ಕರಿಸಿ ನಮ್ಮೊಡನೆ ಬರಲಾಗದೆಂದೂ, ಬಂದರೆ ಕರೆದುಕೊಂಡು ಹೋಗುವುದಿಲ್ಲ

ವೆಂದೂ ಹೇಳಿ ಮುಂದೆ ನಡೆದನು. ಆದರೂ ಆ ಮುದುಕರು ಮಗನನ್ನು ಬಿಟ್ಟಿರಲಾರದ ಮೋಹದಿಂದ ತಾವೂ ಮತ್ತೆ ಆತನ ಬೆನ್ನ ಹಿಂದೆ ಕಾಶಿಗೆ ನಡೆದರು.

ಪುಂಡರೀಕನು ಕಾಶಿಯ ಸಮೀಪಕ್ಕೆ ಇರುವ ಕುಕ್ಕುಟಮಹರ್ಷಿಯ ಆಶ್ರಮಕ್ಕೆ ಬಂದು ಕಾಶಿಯು ಇನ್ನೆಷ್ಟು ದೂರದಲ್ಲಿದೆಯೆಂದು ಆತನನ್ನು ಕೇಳಿದನು. ಆ ಋಷಿಯು ತನ್ನ ವೃದ್ಧರಾದ ಮಾತಾಪಿತೃಗಳನ್ನು ಸೇವಿಸುವುದರಲ್ಲಿ ತತ್ಪರನಾಗಿದ್ದನು. ಋಷಿಯು ಪುಂಡರೀಕನನ್ನು ಕುರಿತು—ನಾನು ಕಾಶಿಯನ್ನು ಕಾಣೆನು, ಎಷ್ಟು ದೂರದಲ್ಲಿದೆಯೆಂಬುದನ್ನೂ ಅರಿಯೆನು. ನನಗೆ ನನ್ನ ಈ ತಾಯಿತಂದೆಗಳ ಸನ್ನಿಧಿಯೇ ಕಾಶಿಯು, ಇದೇ ರಾಮೇಶ್ವರವು ಎಂದು ನುಡಿದನು. ತೇಜಸ್ವಿಯಾದ ಆ ಋಷಿಯ ಬಾಯಿಂದ ಹೊರಟ ಈ ಮಾತುಗಳನ್ನು ಕೇಳಿದೊಡನೆ ಪುಂಡರೀಕನಿಗೆ ತಟ್ಟನೆ ಜ್ಞಾನೋದಯವಾಯಿತು. ಮತ್ತು ಈ ವರೆಗೆ ತಾಯಿತಂದೆಗಳ ವಿಷಯದಲ್ಲಿ ಮಾಡಿದ ಆಚರಣೆಯನ್ನು ಕುರಿತು ಪಶ್ಚಾತ್ತಾಪವಾಯಿತು. ಆಗ ಕಾಶಿಗೆ ಹೋಗುವ ವಿಚಾರವನ್ನು ಬಿಟ್ಟು ಕೂಡಲೇ ಅಲ್ಲಿಂದ ಮರಳಿ ತಾಯಿತಂದೆಗಳನ್ನು ಹುಡುಕುತ್ತ ಹೊರಟನು. ದಾರಿಯಲ್ಲಿ ಒಂದು ಕಡೆ ಬಹುಶ್ರಮದಿಂದ ತನ್ನನ್ನು ಹಿಂಬಾಲಿಸಿ ಸಾಗಿ ಬರುತ್ತಿದ್ದ ಮುಪ್ಪಿನ ತಾಯಿತಂದೆಗಳನ್ನು ಕಂಡು ಓಡಿಹೋಗಿ ಅವರ ಪಾದಗಳಿಗೆರಗಿ ತಾನು ಈ ವರೆಗೆ ತಪ್ಪು ಮಾಡಿದೆನೆಂದೂ, ತನ್ನನ್ನು ಕ್ಷಮಿಸಬೇಕೆಂದೂ ಬೇಡಿಕೊಂಡನು. ತಾಯಿತಂದೆಗಳು ಮಕ್ಕಳ ಅಪರಾಧವನ್ನು ಮನದಲ್ಲಿ ಹಿಡಿಯುವರೇ? ಅವರು ಮಗನ ಮನಸ್ಸು ತಿರುಗಿದುದನ್ನು ಕಂಡು ಸಂತೋಷಪಟ್ಟು ಆತನನ್ನು ಹರಸಿದರು.

ಬಳಿಕ ಪುಂಡರೀಕನು ಕಾಶಿಗೆ ಹೋಗದೆ ಹಾಗೆಯೇ ಅಲ್ಲಿಂದ ಹೊರಟು ತನ್ನ ಮನೆಗೆ ಬಂದು ಏಕನಿಷ್ಠೆಯಿಂದ ತಾಯಿತಂದೆಗಳ ಸೇವೆಯನ್ನು ಮಾಡಲಾರಂಭಿಸಿದನು. ಆತನ ಮಾತಾಪಿತೃಭಕ್ತಿಗೆ ಮೆಚ್ಚಿ ಒಮ್ಮೆ ಅಲ್ಲಿಗೆ ಬಂದ ಶ್ರೀಕೃಷ್ಣನನ್ನು ಪುಂಡರೀಕನು ನೋಡದೆ ತಾಯಿತಂದೆಗಳ ಸೇವೆಯಲ್ಲಿಯೇ ತತ್ಪರನಾಗಿದ್ದನು. ಕೊನೆಗೆ ತಾಯಿತಂದೆಗಳೇ ಯಾರೋ ಬಂದಿರುವರು ನೋಡು ಎಂದು ಎಚ್ಚರಿಸಿದರು. ಆದರೂ ಆತನು ಹಿಡಿದ ಸೇವೆಯನ್ನು ಮುಗಿಸದೆ ಅತ್ತಕಡೆಗೆ ನೋಡದೆ ಹತ್ತಿರದಲ್ಲಿದ್ದ ಒಂದು ಇಟ್ಟಿಗೆಯನ್ನು ಸರಿಸಿ ಇಲ್ಲಿ ಕುಳಿತುಕೊಳ್ಳಬೇಕೆಂದು ಹೇಳಿದನು. ಅದೇ ಸ್ಥಳದಲ್ಲಿಯೇ ಈಗ ಪಂಢರ

ಪುರದಲ್ಲಿ ಪಾಂಡುರಂಗಸ್ವಾಮಿಯು ಇಟ್ಟಿಗೆಯ ಮೇಲೆ ನೆಲಸಿರುವನೆಂದೂ ಪುಂಡರೀಕನ ಮಾತಾಪಿತೃಭಕ್ತಿಗೆ ಮೆಚ್ಚಿ ಆತನಿಗೆ ವರವನ್ನು ದಯಪಾಲಿಸಿದನೆಂದೂ ಹೇಳುವರು.

---

ಕರ್ತವ್ಯಪಾಲನ.

## ೫೬. ರೋಮನ್ ಪಹರೆಯವನು.

ಇಟಲಿಯಲ್ಲಿ ವ್ಹಿಸೂವಿಯಸ್ ಪರ್ವತದ ಅಡಿಯಲ್ಲಿ ರೋಮನ್ ಜನರ ಆಳಿಕೆಯಲ್ಲಿ ಪಾಂಪಿಯಾ ಪಟ್ಟಣವು ನೆಲಸಿತ್ತು. ಈ ಪರ್ವತದ ಜ್ವಾಲಾಮುಖಿಯು ಹಲವು ಶತಾಬ್ದಗಳಿಂದ ಸುಪ್ತಾವಸ್ಥೆಯಲ್ಲಿದ್ದುದರಿಂದ ಪರ್ವತದ ಸುತ್ತಲು ಪಟ್ಟಣವು ಹಬ್ಬುಗೊಂಡಿತ್ತು. ಕ್ರಿ. ಶ. ೭೯ ರಲ್ಲಿ ಆದ ಭಯಂಕರ ಸ್ಫೋಟದಲ್ಲಿ ಪಾಂಪಿಯಾ ಮತ್ತು ಹರ್ಕ್ಯುಲೇನಿಯಂ ಎಂಬ ಎರಡು ಪಟ್ಟಣಗಳು ಹುಗಿದುಹೋದುವು. ೨೦ ಅಡಿ ಎತ್ತರವಾಗಿ ಬಿದ್ದ ಬೂದಿ, ಕಲ್ಲು, ಶಿಲಾರಸ (ಲಾವ್ಹಾ) ಇವುಗಳಿಂದ ಮುಚ್ಚಿಹೋದ ಆ ಪಟ್ಟಣಗಳು ೧೭೦೦ ವರ್ಷ ಹಾಗೆಯೇ ಇದ್ದುವು. ಅಷ್ಟು ವರ್ಷಗಳ ತರುವಾಯ ಅಲ್ಲಲ್ಲಿ ಅಗೆದು ಪ್ರಾಚೀನ ಶಿಲ್ಪಕಲೆಯ ಮಾದರಿಯ ವಸ್ತುಗಳನ್ನು ಹೊರಗೆ ತೆಗೆಯುವ ಕೆಲಸಕ್ಕೆ ಆರಂಭವಾಯಿತು. ನೆಪೋಲಿಯನ್ ಬೋನಾಪಾರ್ಟನು ಇಟಲಿಯನ್ನು ಆಕ್ರಮಿಸಿದ ಬಳಿಕ ಶಾಸ್ತ್ರೀಯಪದ್ಧತಿಯಿಂದ ಅಗೆಯುವ ಕೆಲಸವನ್ನಾರಂಭಿಸಿದನು. ೧೮೧೫ ನೆಯ ಇಸವಿಯ ವರೆಗೆ ಈ ಅಗೆಯುವ ಕಾರ್ಯವನ್ನು ಆಯಾಕಾಲದ ಅರಸರು ನಡೆಯಿಸಿದುದರಿಂದ ಎಲ್ಲ ಪಟ್ಟಣವು ಹೊರಗೆ ಬಂದಿರುವುದು. ಅದರಿಂದ ರೋಮನ್‌ಜನರ ಆಚಾರ, ವ್ಯವಹಾರ, ಮನೆಯ ಉಪಕರಣಗಳು, ಅವುಗಳನ್ನಿಡುವ ಪದ್ಧತಿ ಮೊದಲಾದ ವಿಷಯಗಳು ತಿಳಿಯಬಂದಿರುವುವು. ಈ ಪಟ್ಟಣದ ಮೇಲೆ ಬಿದ್ದ ಬೂದಿ ಶಿಲಾರಸ ಮೊದಲಾದುವುಗಳಿಂದ ಅಲ್ಪಾವಕಾಶದಲ್ಲಿ ಮುಚ್ಚಿಹೋದುದರಿಂದ ಪಟ್ಟಣವು ಇದ್ದ ಹಾಗೆಯೇ ಹೂತು ಹೋಗಿತ್ತು. ಮೊದಲು ಬಿಸಿಬೂದಿಯು ಬೀಳುವಾಗ ಅದನ್ನು ಮೈಗೆ ಬಡಿಸಿಕೊಳ್ಳದೆ ಬದುಕಬೇಕೆಂದು ಜನರು ಮನೆಯೊಳಗೆ ಹೋದರು; ಬಳಿಕ ಒಳಗಿನ ಕೋಣೆಗೆ ಓಡಿಹೋಗಿ ಅಲ್ಲಿಯೇ ಸತ್ತುಹೋಗಿರುವರು. ಮಾರ್ಗಗಳಲ್ಲಿ ಇಲ್ಲವೆ ಬೇರೆ ಬಯಲುಪ್ರದೇಶಗಳಲ್ಲಿ ಒಂದೂ ಹೆಣವು ಇಲ್ಲವೆ ಕಂಕಾಲವು ( ಎಲುವಿನ ಹಂದರವು ) ಕಾಣಬಂದಿಲ್ಲ. ಆದರೆ ಪಟ್ಟಣದ ಒಂದು ಭಾಗದಲ್ಲಿ ಕವಚಧಾರಿಯಾಗಿದ ಒಬ್ಬ

ಸಶಸ್ತ್ರ ರೋಮನ್ ಸೈನಿಕನ ಕಂಕಾಲವು ದೊರೆತಿರುವುದು. ಇದನ್ನು ನೋಡಲು ಈ ಪಹರೆಯುವನು ಆ ಮಹಾಪ್ರಳಯದಲ್ಲಿ ಕೂಡ ತನ್ನ ಕರ್ತವ್ಯವನ್ನು ನೆನೆಸಿ ತಾನು ನಿಲ್ಲುವ ಸ್ಥಳದಲ್ಲಿಯೇ ಕದಲದೆ ನಿಂತಿದ್ದನೆಂದೂ ಅದೇ ಸ್ಥಾನದಲ್ಲಿ ಸತ್ತುಹೋದನೆಂದೂ ಸ್ಪಷ್ಟವಾಗಿ ತಿಳಿಯುವುದು. ಮನುಷ್ಯನ ಮನಸ್ಸು ಕರ್ತವ್ಯದಲ್ಲಿ ಎಷ್ಟು ದೃಢವಾಗುವುದೆಂಬುದನ್ನು ಈ ರೋಮನ್ ಸೈನಿಕನು ವ್ಯಕ್ತಮಾಡಿರುವನು.

---

ನ್ಯಾಯನಿಷ್ಠೆ.

## ೫೭. ಆರಿಸ್ಟಾಯಿಡಿಸ್.

ಅಥೆನ್ಸ್‌ಪಟ್ಟಣದ ಸುಪ್ರಸಿದ್ಧ ನ್ಯಾಯಾಧೀಶನಾಗಿದ್ದ ಆರಿಸ್ಟಾಯಿಡಿಸನ ಇದಿರಿಗೆ ಒಂದು ವಿಚಾರಣೆ ನಡೆದಿತ್ತು. ಸಾಕ್ಷಿಗಳನ್ನು ಕೇಳಿಕೊಳ್ಳುವುದು ಮೊದಲಾದ ಕೆಲಸಗಳು ಮುಗಿದ ಬಳಿಕ ಒಂದು ಪಕ್ಷದ ವಕೀಲನು ಆರಿಸ್ಟಾಯಿಡಿಸನನ್ನು ಕುರಿತು—ನ್ಯಾಯಾಧೀಶರೇ, ವಿರುದ್ಧಪಕ್ಷದ ಗೃಹಸ್ಥನು ತಮ್ಮೊಡನೆ ಒಮ್ಮೆ ಅನ್ಯಾಯದಿಂದ ನಡೆದಿರುವನು ಎಂದು ಹೇಳಿ ಆ ಮಾತನ್ನು ನೆನಪಿಗೆ ತಂದುಕೊಟ್ಟನು. ಆರಿಸ್ಟಾಯಿಡಿಸನು ನಕ್ಕು—ಈಗ ಆ ಮಾತಿನ ವಿಚಾರಣೆ ನಡೆದಿಲ್ಲ. ನಿನ್ನ ಖಟ್ಲೆಯ ವಿಚಾರಣೆ ನಡೆದಿರುವುದು. ಆದುದರಿಂದ ಆ ಮಾತನ್ನೆತ್ತುವುದು ಇಲ್ಲಿ ಬೇಕಾಗಿಲ್ಲ ಎಂದು ಹೇಳಿದನು. ಇನ್ನೊಂದು ಸಮಯದಲ್ಲಿ ಒಬ್ಬ ಕವಿಯ ವ್ಯಾಜ್ಯವು ಆರಿಸ್ಟಾಯಿಡಿಸನಿದಿರಿಗೆ ವಿಚಾರಣೆಗೆ ಬಂದಿತ್ತು. ಕವಿಯು–ನನ್ನ ಮೇಲೆ ದಯೆದೋರಿ ಹೇಗಾದರೂ ಸ್ವಲ್ಪ ಹೆಚ್ಚುಕಡಮೆ ಎಳೆದುತಂದು ನನಗೆ ಅನುಕೂಲವಾಗುವಂತೆ ತೀರ್ಪು ಹೇಳಬೇಕೆಂದು ಬೇಡಿಕೊಂಡನು. ಆಗ ಆರಿಸ್ಟಾಯಿಡಿಸನು–ಅಯ್ಯಾ, ನೀನು ಹೇಳುವಂತೆ ನಿನ್ನ ವಾಜ್ಯದಲ್ಲಿ ಬಹಳ ಹೆಚ್ಚು ಕಡಿಮೆಮಾಡದೆ ಸ್ವಲ್ಪ ವ್ಯತ್ಯಾಸಮಾಡಿ ನಿನ್ನಂತೆ ತೀರ್ಪು ಹೇಳಬಹುದಾಗಿದೆಯೆಂಬುದು ಸರಿಯೆ. ಆದರೆ ಸ್ವಲ್ಪ ಛಂದೋದೋಷವಾದರೂ ನಿಮ್ಮ ಕವಿತೆಯಲ್ಲಿ ಹೇಗೆ ನಡೆಯುವುದಿಲ್ಲವೋ ಹಾಗೆಯೇ ಸ್ವಲ್ಪ ಹೆಚ್ಚುಕಡಮೆ ಎಳೆದು ತಂದರೂ ನಿರ್ದೋಷವಾದ ನ್ಯಾಯವಿಚಾರಣೆಯೆನಿಸಲಾರದು. ಅಷ್ಟರಿಂದಲೇ ನಾನು ನ್ಯಾಯಭ್ರಷ್ಟನಾಗುವೆನೇ ಹೊರತು ನ್ಯಾಯನಿಷ್ಠನೆನಿಸಲಾರೆನು ಎಂದು ಹೇಳಿದನು.

---

ಏಕಲಕ್ಷ.

## ೫೮. ದಾಮಾಜಿಪಂತನು.

ಪಂಢರಪುರದ ದಾಮಾಜಿಪಂತನು ಮಹಾಭಗವದ್ಭಕ್ತನು. ವಿಜಾಪುರದ ಬಾದಶಹನ ತಾಲೂಕದಾರನ ಕೆಲಸವನ್ನು ನೋಡುತ್ತಿದ್ದನು. ಕೆಲವು ವರ್ಷಗಳ ವರೆಗೆ ಮಳೆಯಾಗದಿರಲು ಒಮ್ಮೆ ದೇಶದಲ್ಲಿ ಭಯಂಕರವಾದ ಬರವು ಬಿದ್ದಿತು. ಸರಕಾರದ ತೆರಿಗೆಯು ನಿಂತುಹೋಯಿತು. ದಾಮಾಜಿಯು ಬೊಕ್ಕಸದೊಳಗಿನ ಹಣ, ಕಾಳುಕಡಿಗಳನ್ನೆಲ್ಲ ಬಡಬಗ್ಗರಿಗೆ ಕೊಟ್ಟುಬಿಟ್ಟನು. ಇತ್ತ ಬಾದಶಹನು ಬೊಕ್ಕಸದೊಳಗಿನ ಹಣವನ್ನೆಲ್ಲ ಈಗಲೇ ರಾಜಧಾನಿಗೆ ತಂದು ಒಪ್ಪಿಸಬೇಕೆಂದೂ ಈಗ ಎತ್ತಿದ ಹಣವನ್ನು ಕೂಡಲೆ ಕಳುಹಬೇಕೆಂದೂ ಕಟ್ಟಪ್ಪಣೆಯನ್ನು ಮಾಡಿದನು. ಆಗ ದಾಮಾಜಿಪಂತನು ಒಕ್ಕಲಿಗರಿಗೆ ಯಾವ ತೊಂದರೆಯನ್ನೂ ಕೊಡದೆ ತನ್ನ ಮನೆಮಾರುಗಳನ್ನೆಲ್ಲ ಮಾರಿ ಬಂದ ಹಣವನ್ನು ನಂಬಿಗೆಯ ಆಳಿನ ಸ್ವಾಧೀನದಲ್ಲಿ ಕೊಟ್ಟು ಬಾದಶಹನ ಬೊಕ್ಕಸಕ್ಕೆ ಕಳುಹಿದನು; ಮತ್ತು ಇನ್ನೇನಾದರೂ ತನ್ನ ಆಸ್ತಿಯಿದ್ದರೆ ಅದನ್ನೂ ಮಾರಿ ಬಾದಶಹನಿಗೆ ಎಲ್ಲ ಹಣವನ್ನು ಕಳಿಸಬಹುದಾಗಿತ್ತಲ್ಲವೇ ಎಂದು ಚಿಂತಿಸುತ್ತಿದ್ದನು. ಆ ಆಳು ಬಾದಶಹನಲ್ಲಿಗೆ ಮುಟ್ಟುವದರೊಳಗೆ ವಿಠೋಬನು (ವಿಠ್ಠಲದೇವರು) ಹೊಲೆಯರವನ ವೇಷವನ್ನು ಹಾಕಿಕೊಂಡು ಬಾದಶಹನ ಬಳಿಗೆ ಹೋಗಿ ತಾಲೂಕದಾರನ ಬೊಕ್ಕಸದೊಳಗೆ ಸಿಲಕು ಇದ್ದ ಎಲ್ಲ ಹಣವನ್ನೂ, ನಡೆದ ವರ್ಷದಲ್ಲಿ ಎತ್ತತಕ್ಕ ಹಣವನ್ನೂ ಪೂರ್ಣವಾಗಿ ಒಪ್ಪಿಸಿದ್ದನು. ಆಗ ಬಾದಶಹನು ಬರಗಾಲದಲ್ಲಿ ಸಹ ಎಲ್ಲ ಹಣವೂ ಕೈಗೆ ಬಂದುದನ್ನು ನೋಡಿ ಸಂತೋಷದಿಂದ–ಈ ಸಾರೆ ನಿಮ್ಮ ತಾಲೂಕಿನ ಕಂದಾಯವೆತ್ತುವ ಕೆಲಸವನ್ನು ಯಾರು ಮಾಡಿದರು ಎನಲು, ಹೊಲೆಯ ವೇಷದ ವಿಠೋಬನು– "ನಾನು ಎತ್ತಿದೆನನು, ತಾಲೂಕದಾರನ ಕೈಯಿಂದ ಆಗಲಿಲ್ಲ' ಎಂದು ಹೇಳಿದನು. ಆಗ ಬಾದಶಹನು ನಿನ್ನ––ಸಂಬಳವೆಷ್ಟು ಎಂದು ಕೇಳಲು, ವಿಠೋಬನು—'ಏಕಲಕ್ಷ' ಎಂದನು. ಬಾದಶಹನು ಏಕಲಕ್ಷ ಕವಡೆಗಳು ಅಂದರೆ ಸುಮಾರು ೩೧ ರೂಪಾಯಿ ಈತನ ಸಂಬಳವೆಂದು ತಿಳಿದನು; ಮತ್ತು ಇಂಥ ಸಮರ್ಥನಾದ ಆಳಿಗೆ ಇದೇನೂ ಹೆಚ್ಚಲ್ಲವೆಂದು ಆಲೋಚಿಸಿ,–ನಿನಗೆ ಏಕಲಕ್ಷವೇಕೆ, ೨–೩ ಲಕ್ಷ ಕೊಡುವೆನು; ಎಲ್ಲಾ ಪ್ರಾಂತದ ತೆರಿಗೆಯನ್ನು ಎತ್ತಬಲ್ಲೆಯಾ ಎಂದು ಕೇಳಿದನು. ವಿಠೋಬನು—ದೇವರೂ, ಏಕಲಕ್ಷವಲ್ಲದೆ ನಾನು ಯಾರ ಬಳಿಯಲ್ಲಿಯೂ ಕೆಲಸಮಾಡಲಾರೆನು. ನನಗೆ ೨–೩ ಲಕ್ಷಗಳು

ಬೇಡ ಎಂದನು. ಆಗ ಬಾದಶಹನು ಕೀಳುಜಾತಿಯ ಈ ಮನುಷ್ಯನು ಕೇವಲ
ಬುದ್ಧಿಹೀನನು; ೨–೩ ಲಕ್ಷ ಕೊಡುವೆನೆಂದರೂ 'ಏಕಲಕ್ಷ' ವನ್ನೇ ಬೇಡು
ತ್ತಾನೆ ಎಂದು ಉಪಹಾಸಮಾಡಿ ಕಳುಹಿಬಿಟ್ಟನು. ಆತನು ಹೊರಟು ಹೋದ
ಬಳಿಕ ಸ್ವಲ್ಪ ವೇಳೆಯಲ್ಲಿಯೇ ಇನ್ನೊಬ್ಬ ಅದೇ ವೇಷದ ಮತ್ತು ಅದೇ ಆಕೃ
ತಿಯ ಆಳು ಬಾದಶಹನ ಬಳಿಗೆಬಂದು ತಾಲೂಕದಾರನು ಕಳುಹಿದ ಹಣವೆಂದು
ಹೇಳಿ ಕಡಮೆ ಹಣವನ್ನು ಜಮೆ ಮಾಡಿಸಿದನು. ಮತ್ತು—ದೇವರೂ, ಈ
ವರ್ಷ ನಮ್ಮ ತಾಲೂಕಿನಲ್ಲಿ ಭಯಂಕರವಾದ ಬರಗಾಲವು; ಒಕ್ಕಲಿಗರು
ಹೊಟ್ಟೆಗಿಲ್ಲದೆ ಸಾಯುತ್ತಾರೆ; ತಾಲೂಕದಾರರು ಬಡಒಕ್ಕಲಿಗರ ಮರು
ಗನ್ನು ನೋಡಲಾರದೆ ತಮ್ಮ ಮನೆಮಾರುಗಳನ್ನೆಲ್ಲ ಮಾರಿ ಈ ಹಣವನ್ನು
ಕಳುಹಿದ್ದಾರೆ. ಸಾವಿರಾರು ಜನರು ಸಾಯುತ್ತಿರುವ ಈ ವೇಳೆಯಲ್ಲಿ ಇದ
ಕ್ಕಿಂತ ಹೆಚ್ಚಿಗೆ ಹಣವನ್ನು ಕಳುಹುವುದಾಗುವುದಿಲ್ಲವೆಂದು ತಾಲೂಕ
ದಾರರು ಬಿನ್ನವಿಸಿಕೊಂಡಿದ್ದಾರೆ ಎಂದು ನುಡಿದನು. ಆಗ ಬಾದಶಹನೂ
ಓಲಗದವರೂ—ದೇವರೇ ಹೊಲೆಯನ ವೇಷದಿಂದ ಬಂದು ತನ್ನ ಭಕ್ತನ
ಕಾರ್ಯವನ್ನು ಮಾಡಿಹೋದನೆಂದೂ, ತನಗೆ ಸಂಬಳವು 'ಏಕಲಕ್ಷ'ವೆಂದು
ಹೇಳಿ ತನ್ನಲ್ಲಿ ಏಕಲಕ್ಷವುಳ್ಳವರನ್ನು ತಾನು ಉದ್ಧರಿಸುತ್ತೇನೆಂಬ ಉಪದೇಶ
ವನ್ನು ಮಾಡಿದನೆಂದೂ ನೆನೆದು ಆಶ್ಚರ್ಯಬಟ್ಟರು. ಭಗವದ್ಗೀತೆಯಲ್ಲಿ ಭಗ
ವಂತನು ಅರ್ಜುನನಿಗೆ ಇದೇ ಅರ್ಥದಲ್ಲಿ 'ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ' ಎಂದು ಉಪದೇಶಿಸಿರುವನು. ಪರಮೇಶ್ವರ
ನಲ್ಲಿ "ಏಕಲಕ್ಷ" ವನ್ನು ಇಟ್ಟುದರಿಂದ ದಾಮಾಜಿಪಂತನಿಗೆ ಪರಮೇ
ಶ್ವರನು ಅಧೀನನಾಗಿದ್ದನು.

---

ಮಹನೀಯರ ಮನಸ್ಸು.

## ೫೯. ಮಹಾತ್ಮನಾದ ಉಮರ.

ಮಹಾತ್ಮನಾದ ಉಮರನು ಮಹಮ್ಮದ ಪೈಗಂಬರರ ಭಕ್ತನೂ
ಪ್ರಿಯಶಿಷ್ಯನೂ ಆಗಿದ್ದನು. ಈತನು ಮುಸಲ್ಮಾನ ಧರ್ಮದ ಇತಿಹಾಸಾಕಾಶ
ದಲ್ಲಿ ಹೊಳೆಹೊಳೆವ ನಕ್ಷತ್ರದಂತೆ ಇರುವನು. ಇವನು ಮುಸಲ್ಮಾನನಾಗುವ
ಪೂರ್ವದಲ್ಲಿ ಅತ್ಯಂತ ಸಾಹಸಿಯೂ, ಉತ್ಸಾಹಶಾಲಿಯೂ ಆದ ವೀರ
ನೆಂದು ಹೆಸರುವಾಸಿಯಾಗಿದ್ದನು. ಮಹಾಪುರುಷನಾದ ಮಹಮ್ಮದನು

ಪ್ರಚಾರಪಡಿಸಿದ ಏಕೇಶ್ವರವಾದದ (ಜಗತ್ತಿಗೆ ಒಬ್ಬನೇ ದೇವರು ಎಂಬ ಮಾತಿನ) ವಿಷಯವಾಗಿ ಮಕ್ಕೆಯಲ್ಲಿ ಗೊಂದಲವು ನಡೆಯುಹತ್ತಲು, ಸರಳ ಮನಸ್ಸಿನ ಉಮರನು—ಈ ದೊಡ್ಡ ವಾದವಿವಾದದ ಮೂಲವನ್ನೇ ಕಿತ್ತು ಬಿಸುಟುವುದು ಒಳ್ಳೆಯದು; ಈ ಹೊಸ ಧರ್ಮಪ್ರಚಾರಕನನ್ನು ಇರಿದು ಬಿಟ್ಟರೆ ಇದೆಲ್ಲ ಮುಗಿದು ಹೋಗುವುದು, ಇದು ನನ್ನ ಕರ್ತವ್ಯವು; ಎಂದು ಆಲೋಚಿಸಿ ಕೂಡಲೆ ಕೈಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಮಹಮ್ಮದ ಪೈಗಂಬರರ ಮನೆಯ ಹಾದಿಯ ಹಿಡಿದನು. ಪೈಗಂಬರರ ಮನೆಯ ಬಾಗಿಲಲ್ಲಿ ತಡೆಯುವವರಾರೂ ಇರಲಿಲ್ಲ. ಉಮರನು ನೆಟ್ಟಗೆ ಒಳಗೆ ಹೋಗಿ ನೋಡುತ್ತಾನೆ—ಪೈಗಂಬರರು ಉಪಾಸನೆ (ನಮಾಜು) ಯನ್ನು ಮುಗಿಸಿ ಪರಮೇಶ್ವರನನ್ನು ಕುರಿತು ಕರುಣಸ್ವರದಿಂದ—ದೇವರೇ, ದಯಮಾಡಿ ಉಮರನ ಮನಸ್ಸು ತಿರುಗುವಂತೆ ಮಾಡು. ಆ ಮನುಷ್ಯನು ಹೊರಗೆ ಹೇಗೆ ಕಾಣಿಸಿದರೂ ಒಳಗೆ ಸಜ್ಜನನು. ಆದರೆ ಆತನಿಗೆ ನಿಜವಾದ ಕಲ್ಯಾಣದ ಮಾರ್ಗವು ತಿಳಿದಿಲ್ಲ. ಅವನು ದುರ್ಗತಿಗಿಳಿಯಬಾರದು; ದಯಾನಿಧಿಯೇ, ದಾಸಾನುದಾಸನ ಈ ಬೇಡಿಕೆಯನ್ನು ಪೂರ್ಣಮಾಡು, ತಮ್ಮ ಪುಣ್ಯಾಕರವಾದ ನಾಮದ ಮೇಲೆ ಆತನಲ್ಲಿ ಭಕ್ತಿಯನ್ನು ಹುಟ್ಟಿಸು ಎಂದು ಬೇಡಿಕೊಳ್ಳುತ್ತಿದ್ದರು. ಕೊಲೆ ಮಾಡುವುದಕ್ಕೆ ಹೋದ ಉಮರನು ತನ್ನ ಸಲುವಾಗಿ ನಡೆದ ಈ ಪ್ರಾರ್ಥನೆಯನ್ನು ಕೇಳಿದನು. ಸರಳಸ್ವಭಾವದ ಉಮರನ ಮನಸ್ಸು ಕರಗಿ ಹೋಯಿತು. ಕೂಡಲೆ ಆತನು ಕತ್ತಿಯನ್ನು ಕೆಳಗೆ ಒಗೆದು ಪೈಗಂಬರರ ಕಾಲಿಗೆರಗಿ ನನ್ನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಬೇಕೆಂದು ಕೇಳಿಕೊಂಡನು; ಮತ್ತು ಅಂದಿನಿಂದ ಮುಸಲ್ಮಾನಧರ್ಮವನ್ನು ಸ್ವೀಕರಿಸಿ ಆ ಧರ್ಮದ ಪ್ರಸಾರಕಾರ್ಯದಲ್ಲಿ ಪೈಗಂಬರರಿಗೆ ಬಹಳ ನೆರವಾದನು. ಇಂಥ ದೊಡ್ಡ ಮನುಷ್ಯನು ಮುಸಲ್ಮಾನ ಧರ್ಮವನ್ನು ಕೈಕೊಂಡುದರಿಂದ ಆ ಪಕ್ಷದಲ್ಲಿ ಉತ್ಸಾಹವು ಬೆಳೆಯಿತು. ಪ್ರತಿಪಕ್ಷವು ಎದೆಗುಂದಿತು. ಮಹಮ್ಮದ ಪೈಗಂಬರರ ಮನಸ್ಸು ಭಗವದ್ಧ್ಯಾನದಿಂದ ಅಷ್ಟೊಂದು ಉನ್ನತವಾದುದರಿಂದಲೇ ಆರಂಭಕಾಲದ ಮುಸಲ್ಮಾನರನ್ನು ಅವರು ಸಹಜವಾಗಿ ದಾರಿಗೆ ತಂದರು. (ಕೆಲವರು ಉಮರನು ತನ್ನ ತಂಗಿಯ ಮನೆಗೆ ಹೋದಾಗ ಕುರಾಣಶ್ರವಣ ಮಾಡಿದುದರಿಂದ ಆತನ ಮನಸ್ಸು ಮುಸಲ್ಮಾನ ಧರ್ಮದ ಕಡೆಗೆ ಒಲೆದಿತ್ತೆಂದು ಹೇಳುವರು.)

ಬೊಕ್ಕಸದೊಳಗಿನ ಹಣವು ಪ್ರಜೆಗಳದು.

## ೬೦. ಹರಿಶ್ಚಂದ್ರ ಮಹಾರಾಜ.

ದೇಶದಲ್ಲಿ ಶಾಂತತೆಯನ್ನು ಕಾದುಕೊಳ್ಳುವುದಕ್ಕಾಗಿ ಅರಸರು ಪ್ರಜೆಗಳಿಂದ ಅವರ ಆದಾಯದ ಆರನೆಯ ಅಂಶವನ್ನು ತೆಗೆದುಕೊಳ್ಳುತ್ತಿದ್ದರೆಂದು ಹಿಂದುಶಾಸ್ತ್ರಗಳಲ್ಲಿ ಹೇಳಿದೆ. ಶಾಂತತೆಯನ್ನು ಕಾಪಾಡಿಕೊಳ್ಳುವುದಕ್ಕೆ "ಫಿ" ಇಲ್ಲದೆ ದಿವಾಣಿ ಫೌಜದಾರಿ ತೀರ್ಪುಗಳನ್ನು ಮಾಡುವುದು, ಆನೆ ಕುದುರೆ ರಥ ಶಸ್ತ್ರಾಸ್ತ್ರ ಮುಂತಾದ ಯುದ್ಧಸಾಮಗ್ರಿಗಳನ್ನು ಸಂಗ್ರಹಿಸುವುದು, ಯುದ್ಧಕಾಲಕ್ಕೆ ಬೇಕಾಗುವ ಹೆಚ್ಚಿನ ವೆಚ್ಚ ಈ ಕೆಲಸಗಳಿಗೆ ಮಾತ್ರ ಆ ಹಣವು ಉಪಯೋಗಿಸಲ್ಪಡುವುದು. ಇದಲ್ಲದೆ ಇನ್ನಾವ ತೆರಿಗೆಯನ್ನೂ ಎತ್ತುತ್ತಿರಲಿಲ್ಲ. ಅರಸನ ಸ್ವಂತ ಹೊಲಗಳ ಹುಟ್ಟುವಳಿಯಿಂದ ಆತನ ಮನೆಯ ವೆಚ್ಚವು ನಡೆಯುವುದು. ಪ್ರಜೆಗಳು ಕೊಟ್ಟ ಹಣದಲ್ಲಿ ಒಂದು ಕವಡೆಯನ್ನಾದರೂ ಅರಸನು ತನ್ನ ಸಲುವಾಗಿ ಉಪಯೋಗಿಸಿಕೊಳ್ಳುತ್ತಿರಲಿಲ್ಲ. ಅಮಾತ್ಯ, ಧರ್ಮಾಧಿಕಾರಿ ಮೊದಲಾದ ಕಾಮದಾರರಿಗೂ ಉಂಬಳಿಗಳಿರುತ್ತಿದ್ದುವು. ನೇಪಾಳದಲ್ಲಿ ಈಗಲೂ ಹಲವು ಜನ ಕಾಮದಾರರಿಗೆ ನೌಕರಿಯ ಹೊಲಗಳಿರುವುವು.

ಹರಿಶ್ಚಂದ್ರಮಹಾರಾಜನ ಕಾಲದಲ್ಲಿ ಒಮ್ಮೆ ರಾಜ್ಯದಲ್ಲಿ ಪ್ರಜೆಗಳ ಸಂಖ್ಯೆ ಎಷ್ಟಿರುವುದೆಂಬುದನ್ನು ನೋಡಬೇಕೆಂದು ಮುಖ್ಯ ಅಮಾತ್ಯನು ತಲೆಗೊಂದು ಕವಡೆಯನ್ನು ಸರಕಾರಕ್ಕೆ ಕಳುಹಿಕೊಡಬೇಕೆಂದು ಪ್ರತಿ ಒಂದು ಗ್ರಾಮಕ್ಕೆ ಅಪ್ಪಣೆ ಕಳುಹಿದನು. ಕವಡೆಗಳೆಲ್ಲ ಬಂದಬಳಿಕ ಅವನ್ನೆಲ್ಲ ಎಣಿಸಿ ಒಂದು ಸ್ಥಳದಲ್ಲಿ ರಾಶಿಹಾಕಿದರು. ಇದೇ ಭರತಖಂಡದ ಮೊದಲನೆಯ ಜನಗಣನೆ. ಹರಿಶ್ಚಂದ್ರಮಹಾರಾಜನು ಈ ಕವಡೆಗಳ ದೊಡ್ಡ ರಾಶಿಯನ್ನು ನೋಡಿ ಇವನ್ನು ತನ್ನ ರಾಜ್ಯದಲ್ಲಿ ತಲೆಗೊಂದರಂತೆ ಎತ್ತಿ ತಂದಿರುವುದನ್ನು ಕೇಳಿ ಬಹಳ ವಿಷಾದಪಟ್ಟು ಮಂತ್ರಿಯನ್ನು ಕುರಿತು—ನೀನು ಈ ಮೇರೆಗೆ ನನ್ನನ್ನು ಅನ್ಯಾಯದ ಕರವೆತ್ತಿದ ಪಾಪಕ್ಕೇಕೆ ಗುರಿಮಾಡಿದೆ? ಈಗ ನಾನು ಏನು ಮಾಡಲಿ? ಮನೆಮನೆಗೆ ಈ ಕವಡೆಗಳನ್ನು ಮುಟ್ಟಿಸಹೇಳಿದರೆ ಕಾಮದಾರರು ಅವನ್ನು ಬಹಳಮಾಡಿ ಮುಟ್ಟಿಸುವುದಿಲ್ಲ; ಇದೇನು ದೊಡ್ಡ ವಿಷಯವೆಂದು ಒಗೆದು ಬಿಡಬಹುದು, ಇಲ್ಲವೆ ಒಂದು ಕಡೆಗೆ ಇಟ್ಟುಬಿಡಬಹುದು. ಈ ಮೇರೆಗೆ ಚಿಂತೆಗೊಳಗಾದ ಮಹಾರಾಜನ ಕಣ್ಣೀರುಗಳು ಆ ರಾಶಿಯ

ಮೇಲೆ ಬಿದ್ದುವು. ಆಗ ಆ ರಾಶಿಯು ದೇವತಾಪ್ರಸಾದದಿಂದ ಕರಗಿ ಗಟ್ಟಿಯಾಗಿ ಹೋಯಿತು. ರೋಟಸಗಡದಲ್ಲಿ (ಹರಿಶ್ಚಂದ್ರಮಹಾರಾಜನ ಮಗನಾದ ರೋಹಿದಾಸನ ಹೆಸರಿನಿಂದ ರೋಹಿದಾಸಗಡವೆಂದು ಇದು ಪ್ರಸಿದ್ಧವಾಗಿರುವುದು.) ಕೋಡಿಯಾರಿಖೋ ಎಂಬ ಮೊರಡಿಯು, ಕವಡೆಯ ರಾಶಿ ಕರಗಿ ಆಗಿರುವುದೆಂದು ಈಗಲೂ ಹೇಳುತ್ತಿರುವರು.

ಅಸ್ತೇಯ ಎಂದರೆ ಕಳವು ಮಾಡದಿರುವುದು; ಇದೊಂದು ಧರ್ಮಸಾಧನೆಯ ಮುಖ್ಯಾಂಗವು. ಕೇಳದೆ ಒಂದೇ ಸಾರೆ ಎರಡನೆಯವರ ಮಸಿಯನ್ನದ್ದಿಕೊಂಡರೂ, ದೇವರ ಪೂಜೆಗೆಂದು ಒಂದೆರಡು ಹೂವುಗಳನ್ನು ಕೇಳದೆ ತಂದರೂ ಅದು ಕಳವೇ ಸರಿ. ಸಣ್ಣ ವಿಷಯವೆಂದು ಜನರು ಕಳವಿನಲ್ಲಿ ಎಣಿಸದಿದ್ದರೂ ಅವೂ ಕಳವೆಂಬುದು ಸತ್ಯವು. ಅರಸರು ಈ ವಿಷಯವನ್ನು ಬಹು ಕಾಲದಿಂದ ಮರೆಯುತ್ತ ಬಂದಿರುವರು. ಹಲವು ಜನ ಅರಸರು ಬೊಕ್ಕಸದೊಳಗಿನ ಹಣವು ಪ್ರಜೆಗಳದೆಂಬುದನ್ನು ಮರೆತು ತಮ್ಮ ಸ್ವಕೀಯಧನದಂತೆ ಅದನ್ನು ಉಪಯೋಗಿಸುತ್ತ ಬಂದರು. ಈಚೆಗೆ ಬ್ರಿಟಿಶ್ ಸರಕಾರದವರ ಮೇಲ್ವಿಚಾರಣೆಯಲ್ಲಿ ಈ ಭಾವನೆ ಕಡಿಮೆಯಾಗುತ್ತ ಬಂದಿದೆ.

---

ಅತಿಥಿಸತ್ಕಾರ

## ೬೧. ಒಬ್ಬ ಅರಬ.

ಅರಬರು ಅತಿಥಿಸತ್ಕಾರದಲ್ಲಿ ಪ್ರಸಿದ್ಧರು. ಒಬ್ಬ ಅರಬನ ರಾಹುಟಿಗೆ ಆತನ ಮಗನನ್ನು ಕೊಂದ ಇನ್ನೊಬ್ಬ ಅರಬನು ಒಂದು ದಿವಸ ಸಾಯಂಕಾಲಕ್ಕೆ ಬಂದನು. ರಾಹುಟಿಯಲ್ಲಿದ್ದ ಅರಬನು ಈಗ ಬಂದ ಈ ಅರಬನನ್ನು ಕೊಲ್ಲುವೆನೆಂದು ಪಣತೊಟ್ಟಿದ್ದನು. ಆದರೆ ಅತಿಥಿಯು ತಾನು ಶತ್ರುವಿನ ಮನೆಗೆ ಬಂದೆನೆಂಬುದನ್ನರಿಯನು. ಆದರೆ ಆ ರಾಹುಟಿಯಲ್ಲಿದ್ದ ಅರಬನು ತನ್ನ ಮನೆಗೆ ಅತಿಥಿಯಾಗಿ ಬಂದ ಅರಬನನ್ನು ಎಲ್ಲ ಬಗೆಯಿಂದ ಚೆನ್ನಾಗಿ ಸತ್ಕರಿಸಿದನು. ಊಟವಾದ ತರುವಾಯ ಅತಿಥಿಗೆ ಹಾಸಿಗೆಕೊಟ್ಟು ಮಲಗಹೇಳಿದನು. ಈಸತ್ಕಾರದಿಂದ ಅತಿಥಿಯು ವಿಶ್ರಾಂತಿಯನ್ನು ಹೊಂದಿದನು. ಮರುದಿನ ಬೆಳಗ್ಗೆ ಅರಬನು ಅತಿಥಿಯನ್ನು ಎಬ್ಬಿಸಿ ತನ್ನದೊಂದು ಉತ್ತಮವಾದ ಕುದುರೆಯನ್ನು ಆತನಿದಿರಿಗೆ ನಿಲ್ಲಿಸಿ—ನೀನು ನನ್ನ ಒಬ್ಬನೇ ಒಬ್ಬ ಮಗನನ್ನು ಕೊಂಡವನೆಂಬುದನ್ನೂ ನಾನು ನಿನ್ನನ್ನು ಕೊಂದು ಅದರ

ಮುಯ್ಯಿ ತೀರಿಸಿಕೊಳ್ಳುವ ಪಣತೊಟ್ಟಿರುವೆನೆಂಬುದನ್ನೂ ನೀನರಿಯೆ. ಆದರೂ ಈಗ ನೀನು ಎಷ್ಟು ಬೇಗನೆ ಮತ್ತು ಎಷ್ಟು ಜಾಗರೂಕತೆಯಿಂದ ಇಲ್ಲಿಂದ ಪಾರಾಗಿ ಹೋಗಬಲ್ಲೆಯೋ ಆ ರೀತಿಯಾಗಿ ಈಗಲೇ ಪಾರಾಗಿ ಹೋಗು; ಇನ್ನು ಎರಡು ಘಂಟೆಯ ತರುವಾಯ ನಾನು ನನ್ನ ಪಣವನ್ನು ಸಾಧಿಸಿ ಕೊಳ್ಳುವುದಕ್ಕಾಗಿ—ಅಂದರೆ ನಿನ್ನನ್ನು ಕೊಲ್ಲುವುದಕ್ಕಾಗಿ ಬೆನ್ನಟ್ಟಿ ಬರುವೆನು; ಎಂದು ಹೇಳಿ ಆತನನ್ನು ಮುಂದೆ ಕಳುಹಿದನು.

"ಅರಾವಪ್ಯುಚಿತಂ ಕಾರ್ಯಮಾತಿಥ್ಯಂ ಗೃಹಮಾಗತೇ। ಛೇತ್ತುಃ ಪಾರ್ಶ್ವಗತಾಚ್ಛಾಯಾಂ ನೋಪಸಂಹರತಿ ದ್ರುಮಃ"—ವೈರಿ ಮನೆಗೆ ಬಂದರೂ ಆತನಿಗೆ ಅತಿಥಿಸತ್ಕಾರವನ್ನು ಮಾಡಬೇಕು. ಮರವು ತನ್ನನ್ನು ಕಡಿಯ ಬಂದವನ ಮೇಲೆ ಕೂಡ ನೆಳಲನ್ನು ಕೆಡಹದೆ ಇರುವುದಿಲ್ಲ.

ಅತಿಥಿಸತ್ಕಾರವಿಷಯದಲ್ಲಿ ಹಿಂದುಗಳ ಮತ್ತು ಮುಸಲ್ಮಾನರ ವಿಚಾರವು ಒಂದೇ. ಮೇಲ್ತರಗತಿಯ ಯುರೋಪಿಯನ್ನರು ಕೂಡ ಅತಿಥಿಗಳನ್ನು ಚೆನ್ನಾಗಿ ಸತ್ಕರಿಸುವರು. ಅತಿಥಿಯನ್ನು ದೇವರೆಂದು ಭಾವಿಸು ಎಂದು ನಮ್ಮ ಶಾಸ್ತ್ರದ ಅಪ್ಪಣೆಯುಂಟು. ಶಿರಿಯಾಳನೆಂಬ ಅರಸನು ತನ್ನ ಮನೆಗೆ ಅತಿಥಿ ವೇಷದಿಂದ ಬಂದ ಪರಮೇಶ್ವರನಿಗೆ ತನ್ನ ಮಗನನ್ನು ಕೊಂದು ಆತನ ಮಾಂಸದ ಅಡಿಗೆ ಮಾಡಿ ಬಡಿಸಿದನಂತೆ. ಕರ್ಣನು ಅತಿಥಿಗೆ ತನ್ನ ಸಹಜ ಕವಚಕುಂಡಲಗಳನ್ನು ಕೊಟ್ಟನು. ಮಯೂರಧ್ವಜನೆಂಬ ಅರಸನು ತನ್ನ ಬಳಿಗೆ ಅತಿಥಿರೂಪದಿಂದ ಬಂದ ಶ್ರೀಕೃಷ್ಣನಿಗೆ ತನ್ನ ದೇಹಾರ್ಧವನ್ನು ಕೊಯಿಸಿಕೊಟ್ಟನು. ಇವೆಲ್ಲ ಉದಾಹರಣೆಗಳು ಅತಿಥಿಗೆ ಸರ್ವಸ್ವವನ್ನೂ ಅರ್ಪಿಸಬೇಕೆಂಬುದನ್ನು ಜನರಿಗೆ ಸಾರಿ ಹೇಳುತ್ತಿರುವುವು.

---

ಕರ್ಮಫಲ.

## ೬೨. ಯಕ್ಷಪ್ರಶ್ನಗಳು.

ಒಂದಾನೊಂದು ದಿವಸ ವಿಕ್ರಮಾದಿತ್ಯ ಮಹಾರಾಜನ ಸಭೆಗೆ ಒಬ್ಬ ಯಕ್ಷನು ಬಂದು ಅಲ್ಲಿಯ ವಿದ್ವಾಂಸರನ್ನು ಕುರಿತು ನಾಲ್ಕು ಪ್ರಶ್ನೆಗಳನ್ನು ಮಾಡಿದನು. ಅವು:—(೧) ಈಗ ಉಂಟು, ಮುಂದೆಯೂ ಉಂಟು; (೨) ಈಗ ಉಂಟು, ಮುಂದೆ ಇಲ್ಲ; (೩) ಈಗ ಇಲ್ಲ, ಮುಂದೆ ಉಂಟು; (೪) ಈಗಲೂ ಇಲ್ಲ, ಮುಂದೆಯೂ ಇಲ್ಲ. ಉದಾಹರಣೆಗಳನ್ನು ತೋರಿಸಿ ಈ ಮಾತುಗಳ ಅರ್ಥವನ್ನು ಸ್ಪಷ್ಟಗೊಳಿಸಿರಿ ಎಂದು ಕೇಳಿದನು. ಉತ್ತರಗಳನ್ನು ಹೇಳುವ

ಭಾರವು ಕಾಲಿದಾಸನ ಮೇಲೆಯೇ ಬಿದ್ದಿತು. ಆಗ ಕಾಲಿದಾಸನು ಯಕ್ಷ ನನ್ನು ಕುರಿತು ಈ ಎಲ್ಲ ಪ್ರಶ್ನಗಳ ಉತ್ತರಗಳನ್ನು ಹೇಳುವುದಕ್ಕೆ ನನಗೆ ಇನ್ನು ಮೂರು ದಿವಸಗಳ ಅವಧಿ ಬೇಕು ಎಂದು ಕೇಳಿಕೊಂಡನು. ಮೂರು ದಿವಸಗಳ ತರುವಾಯ ಯಕ್ಷನನ್ನು ಕರೆದುಕೊಂಡು ಸಂಗಡ ಬೇಕಾದದುಡ್ಡು ಕಾಸುಗಳನ್ನು ಕಟ್ಟಿಕೊಂಡು ದೂರದಲ್ಲಿದ್ದ ಒಂದು ಪಟ್ಟಣಕ್ಕೆ ಹೋದನು.

(೧) ಅಲ್ಲಿ ಇಬ್ಬರೂ ವೇಷಾಂತರ ಮಾಡಿಕೊಂಡು ಒಬ್ಬ ಶ್ರೀಮಂತನ ಮನೆಗೆ ಹೋದರು. ಕಾಲಿದಾಸನು ಆ ಶ್ರೀಮಂತನಿಗೆ—ಅಯ್ಯಾ, ನಮ್ಮ ದೊಂದು ಮಾತನ್ನು ಕೇಳು; ಮತ್ತೆ ಯಾವ ಅತಿಥಿಸತ್ಕಾರವೂ ನಮಗೆ ಬೇಡ; ನಮ್ಮ ಮಾತನ್ನು ನಡೆಸುವುದಾದರೆ ಅದಕ್ಕೆ ಕೆಲಮಟ್ಟಿಗೆ ದ್ರವ್ಯವನ್ನು ವೆಚ್ಚ ಮಾಡಬೇಕಾಗುವುದಲ್ಲದೆ ಸ್ವಲ್ಪ ಶಾರೀರಿಕಶ್ರಮ, ಅಪಮಾನಗಳನ್ನು ತಾಳಿ ಕೊಳ್ಳಬೇಕಾಗುವುದು. ಆದರೆ ಪಾಪದ ಕೆಲಸವನ್ನೇನೂ ಮಾಡಬೇಕಾಗುವು ದಿಲ್ಲ ಎಂದು ಹೇಳಿದನು. ಶ್ರೀಮಂತನು ಆ ಕೆಲಸದಲ್ಲಿ ಪಾಪದ ಸಂಪರ್ಕ ವಿಲ್ಲೆಂಬುದನ್ನು ಕೇಳಿದೊಡನೆ ಸಂತೋಷದಿಂದ—ನಿಮ್ಮ ಬೇಡಿಕೆಯನ್ನು ಪೂರ್ಣಮಾಡುವೆನೆಂದು ವಚನಕೊಟ್ಟನು. ಆಗ ಕಾಲಿದಾಸನು—ಇಂಥ ಒಂದು ಊರಿನ ಬಾವಿಯನ್ನು ಬಳಿಯಿಸುವುದಕ್ಕೆ ನೂರು ಮೊಹರುಗಳನ್ನು ಕೊಡಬೇಕು; ಈ ಮೊದಲು ನೀವು ಆ ಕೆಲಸಕ್ಕೆ ದ್ರವ್ಯಸಹಾಯ ಮಾಡದಿರು ವುದಕ್ಕೆ ನಾಲ್ಕು ಹೊಡೆತಗಳನ್ನು ಪ್ರಾಯಶ್ಚಿತ್ತವೆಂದು ತಾಳಿಕೊಳ್ಳಬೇಕು ಎಂದೆನಲು, ಶ್ರೀಮಂತನು ವಚನದಂತೆ ನಡೆದು ಅವರ ಬೇಡಿಕೆಯನ್ನು ಪೂರೈಸಿ ಬಂದ ಅತಿಥಿಗಳನ್ನು ಚೆನ್ನಾಗಿ ಸತ್ಕರಿಸಿದನು. ಹೊರಗೆ ಬಂದಬಳಿಕ ಕಾಲಿದಾಸನು ಯಕ್ಷನಿಗೆ—ಈ ಗೃಹಸ್ಥನಿಗೆ ಈಗ (ಐಶ್ವರ್ಯ ಸುಖಶಾಂತಿ ಗಳು) ಉಂಟು; (ಧರ್ಮಾಚರಣ ಮಾಡುವುದರಿಂದ) ಮುಂದೆಯೂ ಉಂಟು ಎಂದು ಹೇಳಿದನು. (೨) ಮುಂದೆ ಕಾಲಿದಾಸನು ಬಡತಿರುಕನ ವೇಷ ದಿಂದಲೂ, ಯಕ್ಷನು ಸದ್ಗೃಹಸ್ಥನ ವೇಷದಿಂದಲೂ ಮತ್ತೊಬ್ಬ ಶ್ರೀಮಂತನ ಮನೆಗೆ ಹೋದರು. ತಿರುಕನ ವೇಷದ ಕಾಲಿದಾಸನು ಭಿಕ್ಷೆಬೇಡಲು, ಶ್ರೀಮಂತನು—ನಿಮ್ಮಂಥ ಜನರು ದೇಶದಲ್ಲಿ ಇರಬೇಕಾದ ಅವಶ್ಯವಿಲ್ಲ; ನಾವು ನಮ್ಮ ದ್ರವ್ಯದಿಂದ ಸುಖವಿಲಾಸಗಳನ್ನು ಅನುಭೋಗಿಸುತ್ತೇವೆ; ನೀವು ದುಡಿದು ಹೊಟ್ಟೆಹೊರೆಕೊಳ್ಳಬಾರದೇಕೆ? ನಮಗೆ ಮಂದಿಯ ಸಹಾಯವೂ

ಬೇಡ, ನಾವು ಮುಂದಿಗೆ ಸಹಾಯವನ್ನು ಮಾಡಲೂ ಆರೆವು; ಎಂದು ಹೇಳಿದನು. ಆ ಬಳಿಕ ಸದ್ಗೃಹಸ್ಥನ ವೇಷ ಹಾಕಿಕೊಂಡ ಯಕ್ಷನು ಮೊದಲೇ ಗೊತ್ತುಮಾಡಿಕೊಂಡ ಮೇರೆಗೆ ಶ್ರೀಮಂತನನ್ನು ಕುರಿತು—ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ದ್ರವ್ಯಸಹಾಯವನ್ನು ಕೇಳಿದನು. ಆಗ ಶ್ರೀಮಂತನು-ಇಂಥ ಧರ್ಮದ ಕೆಲಸಗಳನ್ನು ನಾವು ಒಪ್ಪುವುದಿಲ್ಲ. ದೇವಸ್ಥಾನಗಳಿಗೇನು ಕೊರತೆಯಿದೆ? ಒಂದು ಬಿದ್ದು ಹೋದರೇನು ಕೆಟ್ಟಿತು? ನಮ್ಮ ದ್ರವ್ಯವು ನಮ್ಮ ಸುಖೋಪಭೋಗಕ್ಕೇ ಸಲ್ಲತಕ್ಕುದು. ನೀವು ಅಷ್ಟೊಂದು ಧಾರ್ಮಿಕರಾಗಿದ್ದರೆ ಅದಕ್ಕೆ ಬೇಕಾಗುವ ಎಲ್ಲ ಹಣವನ್ನು ನೀವೇ ದುಡಿದು ಸಂಪಾದಿಸಬಾರದೇಕೆ? ನಾನು ಈ ಕೆಲಸದಲ್ಲಿ ಪಾಲುಗಾರನಾಗುವೆನೆಂದು ನಿಮ್ಮನ್ನೆಂದೂ ಕೇಳಿಕೊಂಡಿಲ್ಲ ಎಂದು ಹೇಳಿದನು. ಹೊರಗೆ ಬಂದ ಬಳಿಕ ಕಾಲಿದಾಸನು ಯಕ್ಷನಿಗೆ—ಈ ಗೃಹಸ್ಥನಿಗೆ ಈಗ ಉಂಟು; ಮುಂದೆ ಇಲ್ಲ ಎಂದು ಹೇಳಿದನು. (೩) ಬಳಿಕ ಇಬ್ಬರೂ ಭಿಕ್ಷುಕರ ವೇಷದಿಂದ ಒಬ್ಬ ಬಡವನ ಮನೆಗೆ ಹೋಗಿ ಅಯ್ಯಾ, ನಮಗೆ ಬಹಳ ಹಸಿವೆಯಾಗಿದೆ ಎಂದು ಕೂಗಿದರು. ಆಗ ಆ ಬಡವನು ಎರಡು ರೊಟ್ಟಿಗಳನ್ನಿಟ್ಟುಕೊಂಡು ಊಟಮಾಡುವ ಸಿದ್ಧತೆಯಲ್ಲಿದ್ದನು. ಅತಿಥಿಗಳ ದನಿಯನ್ನಾಲಿಸಿ ಚಟ್ಟನೆ ಎದ್ದು ಹೊರಗೆ ಬಂದು—ಕೈಕಾಲು ತೊಳೆದುಕೊಳ್ಳಿರಿ, ಊಟಕ್ಕೆ ಸಿದ್ಧವಿದೆ; ಮೂವರಿಗೆ ಸಾಲುವಷ್ಟು ಇಲ್ಲವಿದ್ದರೂ ಇದ್ದಷ್ಟರಿಂದಲೇ ಹೇಗಾದರೂ ಸಾಯಂಕಾಲದ ವರೆಗೆ ಜೀವ ಹಿಡಿಯುವ; ಜಗತ್ತಿನ ಊಟದ ಭಾರವನ್ನು ಹೊತ್ತ ಪರಮೇಶ್ವರನು ಸಾಯಂಕಾಲದ ವ್ಯವಸ್ಥೆಯನ್ನು ಮಾಡುವನು ಎಂದು ಹೇಳಿದನು. ಹೊರಗೆ ಬಂದ ಬಳಿಕ ಕಾಲಿದಾಸನು ಯಕ್ಷನಿಗೆ–ಈತನಿಗೆ ಈಗ ಇಲ್ಲ ಮುಂದೆ ಉಂಟು ಎಂದು ಹೇಳಿದನು. (೪) ಮುಂದೆ ಇಬ್ಬರೂ ಸದ್ಗೃಹಸ್ಥರ ವೇಷವನ್ನಳವಡಿಸಿಕೊಂಡು ಒಬ್ಬ ಭಿಕ್ಷುಕನ ಬಳಿಗೆ ಹೋದರು. ಮತ್ತು ಆತನ ದುರವಸ್ಥೆಗೆ ಮರುಗಿ ಸಹಾನುಭೂತಿಯನ್ನು ತೋರ್ಪಡಿಸಿದಂತೆ ಮಾಡಿ ಆತನಿಗೆ ಕೆಲವು ರೂಪಾಯಿಗಳು, ಕೆಲವು ಚಿಲ್ಲರೆಗಳು ಸೇರಿ ಒಂದು ನೂರು ರೂಪಾಯಿಗಳನ್ನು ಕೊಟ್ಟರು. ಕೆಲವು ವೇಳೆಯಾದ ಬಳಿಕ ಭಿಕ್ಷುಕರ ವೇಷದಿಂದ ಮರಳಿ ಅವನ ಬಳಿಗೆ ಬಂದು—ಅಯ್ಯಾ, ನಮಗೆ ಒಂದೊಂದು ದುಡ್ಡನ್ನು ಕೊಡು, ಹಸಿವೆಯಿಂದ ಬಹಳ ಬಳಲಿದ್ದೇವೆ. ಎಂದು ಕೇಳಿದರು. ಆಗ ಆ ಭಿಕ್ಷುಕನು ಅದೇ ಆಗ ದೊರೆತ ಹಣವನ್ನು ಮುಚ್ಚಿಟ್ಟುಕೊಂಡು–ನಾನು ಭಿಕ್ಷುಕನು, ನನ್ನ

ಹತ್ತಿರ ಏನೂ ಇಲ್ಲ; ನನಗೆ ಯಾರೂ ಎಂದೂ ದುಡ್ಡು ಕೊಟ್ಟಿಲ್ಲ; ದುಡಿದು ತಿನ್ನಬಾರದೇ? ನನ್ನ ಬಳಿಗೆ ಏಕೆ ಸಾಯುತ್ತ ಬಂದಿರಿ? ಎಂದು ನುಡಿದನು. ಆ ಸ್ಥಳದಿಂದ ಹೊರಟು ಬಂದ ಬಳಿಕ ಕಾಳಿದಾಸನು ಯಕ್ಷನಿಗೆ—ಈತನಿಗೆ ಈಗಲೂ ಇಲ್ಲ; ಮುಂದೆಯೂ ಇಲ್ಲ ಎಂದು ಹೇಳಿದನು.

ತಕ್ಕ ಉತ್ತರಗಳು ದೊರೆತುದರಿಂದ ಯಕ್ಷನು ಸಂತೋಷದಿಂದ ಹೊರಟುಹೋದನು.

---

ದಯೆ.

## ೬೩. ಸ್ವೀಡನದ ಔಷಧಾಲಯ.

ಸ್ವೀಡನದ ಅರಸನ ತಂಗಿಯಾದ ಪ್ರಿನ್ಸೆಸ್ ಯೂಜಿನಿ ಎಂಬಾಕೆ ತನ್ನ ಮುತ್ತುರತ್ನಗಳ ಒಡವೆಗಳನ್ನೆಲ್ಲ ಮಾರಿ ಒಂದು ಔಷಧಾಲಯವನ್ನಿಡಿಸಿದಳು. ರೋಗಿಗಳ ಶುಶ್ರೂಷೆಗಾಗಿ ತಾನು ಯಾವಾಗಲೂ ಅಲ್ಲಿಗೆ ಹೋಗುತ್ತಿದ್ದಳು. ಒಬ್ಬ ರೋಗಿಯು ಆಕೆಯ ಈ ದಯೆಯನ್ನು ಕಂಡು ಬಹಳ ಸಂತೋಷಬಟ್ಟು ಮನಸ್ಸಿನಲ್ಲಿ ಹಿಡಿಸಲಾರದೆ ಅತ್ತುಬಟ್ಟನು. ಅರಸುಮಗಳು ಆತನ ಕಣ್ಣೀರ ಹನಿಗಳನ್ನು ನೋಡಿ ಬಹಳ ಹರ್ಷಬಟ್ಟು—"ನಾನು ನನ್ನ ಮುತ್ತುರತ್ನಗಳನ್ನು ಮರಳಿ ಕಂಡೆನು" ಎಂದು ನುಡಿದಳು.

---

ಸ್ಪಷ್ಟವಾದಿತ್ವ.

## ೬೪. ಬಗದಾದದ ಕಾಜಿ.

ಬಗದಾದದ ಖಲೀಫನಾಗಿದ್ದ 'ಹಕೀಮ' ಎಂಬವನು ಸ್ವಂತದ ಆಸ್ತಿಯನ್ನು ಹೆಚ್ಚಿಸುವುದಕ್ಕಾಗಿ ತನ್ನ ಹೊಲಕ್ಕೆ ಹತ್ತಿದ ಒಬ್ಬ ಮುದುಕೆಯ ಹೊಲವನ್ನು ಬಲುಮೆಯಿಂದ ಹಿಡಿದುಕೊಳ್ಳುವುದಕ್ಕೆ ತನ್ನ ಕೈಕೆಳಗಿನ ಅಧಿಕಾರಿಗೆ 'ಹುಕುಮು' ಮಾಡಿದನು. ಏಕೆಂದರೆ, ಆ ಮುದುಕೆ ಆ ಹೊಲವನ್ನು ಬೆಲೆಗೆ ಮಾರುವುದಕ್ಕೆ ಒಡಂಬಟ್ಟಿರಲಿಲ್ಲ. ಖಲೀಫನ ಕಾಮದಾರನು ಬಲುಮೆಯಿಂದ ಹೊಲವನ್ನು ಹಿಡಿದುಕೊಂಡನು. ಆಗಲಾ ಮುದುಕೆ ನ್ಯಾಯಪಕ್ಷಪಾತಿಯೆಂದು ಹೆಸರಾದ ಅಲ್ಲಿಯ ಕಾಜಿ (ನ್ಯಾಯಾಧೀಶ) ಯ ಕಡೆಗೆ ಅರ್ಜಿಯ ಮಾಡಿದಳು. ಕಾಜಿಯು, ಖಲೀಫನು ಅನ್ಯಾಯ ಮಾಡಿದನೆಂದು ತಿಳಿದು ಒಂದು ದಿವಸ ದೊಡ್ಡದೊಂದು ಬುಟ್ಟಿಯನ್ನೂ ಗುದ್ದಲಿಯನ್ನೂ ಹೊರಿಸಿಕೊಂಡು ಖಲೀಫನ ಬಳಿಗೆ ಬಂದು—ಒಬ್ಬ ಮುದುಕೆ ಹೊಲದ ಸಲುವಾಗಿ ತಮ್ಮ ಮೇಲೆ ಅರ್ಜಿಯ ಮಾಡಿರುತ್ತಾಳೆ; ತೀರ್ಪು ಮಾಡಬೇಕಾಗಿದೆ; ಆ ಹೊಲದ ಮಣ್ಣನ್ನು ಅಗೆದು ಈ ಬುಟ್ಟಿಯಲ್ಲಿ ತುಂಬುವುದಕ್ಕೆ

ಒಪ್ಪಿಗೆಯನ್ನು ಕೊಡಬೇಕಲ್ಲದೆ ತಾವು ದಯೆಮಾಡಿ ಆ ಹೊಲದ ವರೆಗೆ ಬರಬೇಕು ಎಂದು ಕೇಳಿಕೊಂಡನು. ಖಲೀಫನು ಕಾಜಿಯ ವಿಲಕ್ಷಣವಾದ ಈ ನ್ಯಾಯವಿಚಾರಣೆಯ ಪ್ರಕಾರವನ್ನು ನೋಡಿ ಕೌತುಕದಿಂದ ಆ ಮಾತಿಗೆ ಒಪ್ಪಿದನು. ಕಾಜಿಯು ಖಲೀಫನನ್ನು ಆ ಹೊಲಕ್ಕೆ ಕರೆತಂದನು. ಅಲ್ಲಿ ಕಾಜಿಯು ತಾನೇ ಗುದ್ದಲಿಯಿಂದ ಅಗೆದು ಆ ಹೊಲದ ಮಣ್ಣನ್ನು ಆ ದೊಡ್ಡ ಬುಟ್ಟಿಯಲ್ಲಿ ತುಂಬಿದನು. ಬಳಿಕ ತಾನು ಬದಿಗೆ ಸರಿದು ನಿಂತು ಆ ಬುಟ್ಟಿಯನ್ನು ಸ್ವಲ್ಪ ಎತ್ತಿ ಹಿಡಿದಿರಬೇಕೆಂದು ಖಲೀಫನನ್ನು ವಿನಯದಿಂದ ಕೇಳಿಕೊಂಡನು. ಖಲೀಫನು ಕೌತುಕಪಟ್ಟು ನ್ಯಾಯಾಧೀಶನ ವಿಜ್ಞಾಪನೆಯ ಮೇರೆಗೆ ಹಿಂದೆ ಮುಂದೆ ನೋಡದೆ ಆ ಬುಟ್ಟಿಯನ್ನು ಎತ್ತುವುದಕ್ಕೆ ಸಿದ್ಧನಾಗಿ ಹೊರಟನು. ಆದರೆ ಎಷ್ಟು ಶ್ರಮಪಟ್ಟರೂ ಖಲೀಫನಿಂದ ಅದನ್ನು ಎತ್ತುವುದಾಗಲಿಲ್ಲ. ಆಗ ಖಲೀಫನು ಕಾಜಿಗೆ—ಇದು ಬಹಳ ಭಾರವಾಗಿದೆ, ಎತ್ತಲಾರೆನು ಎಂದು ಹೇಳಿದನು. ಆಗ ಕಾಜಿಯು—ಬಲಾತ್ಕಾರದಿಂದ ಸೆಳೆದುಕೊಂಡ ಈ ಹೊಲದ ಒಂದು ಅತಿ ಸ್ವಲ್ಪ ಭಾಗವನ್ನು ಕೂಡ ಭೂಲೋಕದ ನ್ಯಾಯಾಧೀಶನಿದಿರಿಗೆ ಹೊತ್ತುಕೊಂಡು ನಿಲ್ಲಲಾರದ ತಾವು ಜಗತ್ತಿನ ನ್ಯಾಯಾಧೀಶನ ಇದಿರಿಗೆ ಕೊನೆಯ ನ್ಯಾಯವಿಚಾರಣೆಯ ಕಾಲದಲ್ಲಿ ಈ ಇಡಿಹೊಲದ ಭಾರವನ್ನು ಹೇಗೆ ಹೊತ್ತುಕೊಂಡು ನಿಲ್ಲಬಲ್ಲಿರಿ ಎಂದು ಕೇಳಿದನು. ಆಗ ಖಲೀಫನು ತನ್ನ ಕೃತಿಗೆ ನಾಚಿ ಆ ಮುದುಕಿಯ ಹೊಲವನ್ನು ಬಿಟ್ಟುಕೊಟ್ಟನು.

---

ಮಿತಿಮೀರಿದ ಶಾಂತತೆ.

## ೬೫. ಕೃಷ್ಣಾತೀರದ ಒಂದು ಸರ್ಪ.

ಕೃಷ್ಣಾತೀರದಲ್ಲಿದ್ದ ಒಂದು ಊರಲ್ಲಿ ನದಿಯ ದಂಡೆಯ ಬಳಿಯಲ್ಲಿ ಒಂದು ಸರ್ಪವು ವಾಸಮಾಡಿಕೊಂಡಿದ್ದಿತು. ಅದು ನದಿಗೆ ಬರಹೋಗುವ ಜನರಿಗೆ ಬಹಳ ಅಂಜಿಕೆಯನ್ನುಂಟುಮಾಡಿದ್ದಿತು. ಹಲವರನ್ನು ಕಚ್ಚಿದ್ದಿತು. ಅದರ ಉಪಟಳವನ್ನು ಕಂಡು ಒಬ್ಬ ಸಾಧುಪುರುಷನು ಬಂದು ಆ ಸರ್ಪನಿಗೆ—ನೀನು ಯಾರನ್ನೂ ಕಚ್ಚಬೇಡ, ಯಾರು ಏನು ಮಾಡಿದರೂ ಸುಮ್ಮನಿರು ಎಂದು ಆದೇಶಮಾಡಿದನು. ಸರ್ಪವು ಸಾಧುವಿನ ಮಂತ್ರವನ್ನು ಮೀರಲು ಸಮರ್ಥವಾಗದೆ ಅಂದಿನಿಂದ ಸುಮ್ಮನೆ ಇರತೊಡಗಿತು. ಮುಂದೆ ಕೆಲವು ದಿನಗಳಾದ ಬಳಿಕ ಅದು ಕಚ್ಚುವುದಿಲ್ಲವೆಂದೂ ಏನೂ ಮಾಡುವುದಿಲ್ಲವೆಂದೂ ಜನರಿಗೆ ನಂಬುಗೆಯಾದ ಬಳಿಕ ಕೇಳುವುದೇನು? ಜನರು

ಅದಕ್ಕೆ ಕಲ್ಲು ಒಗೆಯಲಾರಂಭಿಸಿದರು; ಕಾಲಲ್ಲಿ ಬಿದ್ದರೆ ತುಳಿತುಳಿದು ಹೋಗಲಾರಂಭಿಸಿದರು. ಹುಡುಗರಿಗೆ ಅದೊಂದು ಆಟದ ಸಾಧನವಾಯಿತು. ಕೊನೆಗೆ ಒಂದು ದಿವಸ ಸಿಂಬೆಯನ್ನು ಮರೆತು ನೀರಿಗೆ ಹೋಗಿದ್ದ ಒಬ್ಬ ಹೆಂಗುಸು ಅತ್ತಿತ್ತ ನೋಡುವಷ್ಟರಲ್ಲಿ ನಿರುಪದ್ರವಿ ಎಂದು ಗೊತ್ತಾಗಿದ್ದ ಆ ಸರ್ಪವನ್ನು ಕಂಡು ಸಿಂಬೆಯಂತೆ ಮಾಡಿ ಅದನ್ನು ತಲೆಯ ಮೇಲಿಟ್ಟು ಅದರ ಮೇಲೆ ನೀರುತುಂಬಿದ ಭಾರವಾದ ಕೊಡವನ್ನು ಹೇರಿಕೊಂಡು ನಡೆದಳು. ಆ ದಿವಸ ದಾರಿಯಲ್ಲಿ ಆ ಸಾಧುವು ಅಕಸ್ಮಾತ್ತಾಗಿ ಬರುತ್ತಿದ್ದನು. ಆಗ ಸರ್ಪನು- ಸ್ವಾಮೀ, ತಮ್ಮ ಆದೇಶವನ್ನು ಪಾಲಿಸುತ್ತಿದ್ದ ನನ್ನ ಈ ದುರವಸ್ಥೆಯನ್ನು ನೋಡಿದಿರಾ, ಎಂದು ಕೇಳಿತು. ಆಗ ಆ ಸಾಧುವು ಸರ್ಪನ ಈ ಅವಹೇಳನವನ್ನು ನೋಡಲಾರದೆ ತನ್ನ ಮಂತ್ರವನ್ನು ಮರಳಿ ತೆಗೆದುಕೊಂಡು—ಸರ್ಪನೇ ಇನ್ನು ನೀನು ಮೊದಲಿನಂತೆ ಇರು ಎಂದು ಹೇಳಿದನು. ಕೂಡಲೆ ಸರ್ಪವು ಅಲ್ಲಿಯೇ ಭುಸ್ ಎಂದು ಆರ್ಭಟಿಸಿತು. ಹೆಂಗುಸು ಕೊಡವನ್ನು ಚಲ್ಲಿ, ತಲೆಯನ್ನು ಕೊಡವಿ ಹತ್ತುಮೊಳ ಹಾರಿ ನಿಂತಳು. ಅಲ್ಲಿದ್ದವರೆಲ್ಲ ದೂರ ಸರಿದು ಓಡತೊಡಗಿದರು. ಸರ್ಪನು ಎಲ್ಲರ ಈ ಭಯದ ಮನ್ನಣೆಯನ್ನು ಹೊಂದುತ್ತ ಯಥೇಷ್ಟವಾಗಿ ಹೋಯಿತು.

---

ಅಂತರಂಗದ ಪಾವಿತ್ರ್ಯ.

## ೬೬. ಶಿವಾಜಿಮಹಾರಾಜರು.

ಶಿವಾಜಿ ಮಹಾರಾಜರು ಸ್ವರಾಜ್ಯಸ್ಥಾಪನೆಯ ಕೆಲಸದಲ್ಲಿ ತೊಡಗಿದಾಗ ಒಮ್ಮೆ ಕೊಂಕಣಕ್ಕೆ ಹೋಗಿದ್ದರು. ಮಹಾರಾಜರ ನಂಬಿಗೆಯ ಸೇವಕನಾದ ಆಬಾಜಿ ಸೋನದೇವ ಎಂಬವನು ಕಲ್ಯಾಣದ ಸುಭೇದಾರನಾದ ಮುಲ್ಲಾನಾ ಅಹಮ್ಮದ ಎಂಬವನನ್ನು ಸಹಕುಟುಂಬನಾಗಿ ಸೆರೆಹಿಡಿದು ಕಲ್ಯಾಣಪ್ರಾಂತವನ್ನೆಲ್ಲ ವಶಪಡಿಸಿಕೊಂಡು ಈ ವಿಜಯವಾರ್ತೆಯನ್ನು ಒಡೆಯನಿಗೆ ಅರುಹಬೇಕೆಂದೂ, ಅದೇ ಸಮಯದಲ್ಲಿ ತನ್ನಿಂದ ಸೆರೆಸಿಕ್ಕಿದ ಮುಲ್ಲಾನಾ ಅಹಮ್ಮದನ ಅದ್ವಿತೀಯ ಲಾವಣ್ಯವತಿಯಾದ ಸೊಸೆಯನ್ನು ಮಹಾರಾಜರಿಗೆ ಕಾಣಿಕೆಯಾಗಿ ಅರ್ಪಿಸಿ ಅವರ ಆನಂದವನ್ನು ಇಮ್ಮಡಿಸಬೇಕೆಂದೂ ಕೊಂಕಣಕ್ಕೆ ಬಂದನು.

ಆಬಾಜಿಯು ಕಲ್ಯಾಣಪ್ರಾಂತವನ್ನು ಜಯಿಸಿದುದಕ್ಕೆ ಮಹಾರಾಜರು ಮೆಚ್ಚಿದರು; ಮತ್ತು ಕಾಣಿಕೆಯಾಗಿ ತಂದ ಸ್ತ್ರೀರತ್ನವನ್ನು ಓಲಗದಲ್ಲಿ ಕಾಣಿಸ

ಬೇಕೆಂದು ಹೇಳಿದರು. ಆಬಾಜಿಯು ಆ ಸ್ತ್ರೀಯನ್ನು ಓಲಗಕ್ಕೆ ಕರೆತಂದನು. ಮಹಾರಾಜರು ಆಕೆಯ ಸೌಂದರ್ಯಾತಿಶಯವನ್ನು ನೋಡಿ—ಈ ಅಕ್ಕನು ಅತ್ಯಂತ ರೂಪವತಿಯಾಗಿರುವಂತೆ ನನ್ನ ಮಾತೃಶ್ರೀಯವರೂ ರೂಪವತಿಯರಾಗಿದ್ದರೆ ನಾನೂ ಅವರ ಹೊಟ್ಟೆಯಲ್ಲಿ ಹೀಗೆಯೇ ರೂಪವಂತನಾಗಿ ಹುಟ್ಟುತ್ತಿದ್ದೆನಲ್ಲವೆ? ಎಂದು ನುಡಿದರು! ಬಳಿಕ ಆ ಸ್ತ್ರೀಗೆ ಅಕ್ಕತಂಗೆಯರಿಗೆ ಕೊಡುವಂತೆ ಮರ್ಯಾದೆಯಿಂದ ವಸ್ತ್ರಾಲಂಕಾರಗಳನ್ನು ಉಡುಗೊರೆಕೊಟ್ಟು ಮೇಣೆಯಲ್ಲಿ ಕುಳ್ಳಿರಿಸಿ ಆಕೆಯನ್ನು ಮರಳಿ ಆಕೆಯ ಮನೆಯವರಿದ್ದಲ್ಲಿಗೆ ಕಳುಹಿಕೊಟ್ಟರು.

ಇಂತಹ ಅಲೌಕಿಕ ಗುಣಗಳಿರುವದರಿಂದಲ್ಲವೆ ಮಹಾತ್ಮರೆನಿಸಿಕೊಳ್ಳುವರು! ಇಂತಹ ಪರನಾರೀಸೋದರರ ಮೇಲಲ್ಲವೆ ಪರಮೇಶ್ವರನ ಅಪಾರವಾದ ಕೃಪೆ!

---

ದೇಶದ ಉನ್ನತಿ.

## ೬೨. ಅಮೇರಿಕದ ಇಂಡಿಯನ್.

ಯುರೋಪಿಯನ್ನರು ಅಮೇರಿಕವನ್ನು ಆಕ್ರಮಿಸಿ ಅಲ್ಲಿ ವಾಸಮಾಡ ತೊಡಗಿದಾಗ ಅಲ್ಲಿಯ ಮೂಲನಿವಾಸಿಗಳಾದ ಕೆಂಪು ಇಂಡಿಯನ್ನರ ಮುಖ್ಯ ಮನುಷ್ಯನೊಬ್ಬನನ್ನು ಯುರೋಪಕ್ಕೆ ಹಿಡಿದುಕೊಂಡು ಬಂದಿದ್ದರು. ಅತ್ಯಂತ ದೇಶಭಕ್ತನಾದ ಆತನು ಯುರೋಪದ ನಾಗರಿಕತೆಯನ್ನು ಕಂಡು, ದೇವರನ್ನು ಕುರಿತು ಹಗಲಿರುಳು—"ದೇವರೇ, ನನ್ನ ದೇಶವು ಹೀಗೆಯೇ ಆಗಲಿ" ಎಂದು ಬೇಡಿಕೊಳ್ಳುತ್ತಿದ್ದನು. ಆತನಿಗೆ ಆಗಾಗ ಕನಸಿನಲ್ಲಿ—'ಹೀಗೆಯೇ ಆದೀತು' ಎಂದು ಪರಮೇಶ್ವರನ ಸಂದೇಶವು ಬಂದಂತೆ ಹೊಳೆಯುತ್ತಿತ್ತು. ಹಲವು ವರ್ಷಗಳ ತರುವಾಯ ಆ ಇಂಡಿಯನ್ನನನ್ನು ಮತ್ತೆ ಅಮೇರಿಕಕ್ಕೆ ಒಯ್ದರು. ಅಲ್ಲಿ ನೋಡುತ್ತಾನೆ-ತನ್ನ ದೇಶದಲ್ಲಿ ಬಹುಜನ ಯುರೋಪಿಯನ್ನರು ಮನೆಮಾಡಿಕೊಂಡು ವಾಸಮಾಡಿರುತ್ತಾರೆ. ಯುರೋಪದಂತೆ ಬಂದರಗಳು, ನಗರಗಳು, ಮಂದಿರಗಳು, ಉದ್ಯಾನಗಳು, ಕಾರಖಾನೆಗಳು ಮೊದಲಾದುವು ಉಂಟಾಗಿವೆ. ಆದರೆ ಅವುಗಳ ಸುತ್ತಲೂ ಬಹು ದೂರದವರೆಗೆ ಒಬ್ಬ ಇಂಡಿಯನ್ನನೂ ಕಾಣಿಸುತ್ತಿರಲಿಲ್ಲ. ಅವರೆಲ್ಲರೂ ದೂರದೂರದ ಅಡವಿಗೆ ಓಡಿಸಲ್ಪಟ್ಟಿರುವರು. ಆ ಇಂಡಿಯನ್ನನು ಮನನೊಂದು ಅಳುತ್ತ ಪರಮೇಶ್ವರನಿಗೆ ಮೊರೆಯಿಟ್ಟು—ಅಯ್ಯೋ, ದೇವರೇ! ಇದೇನಾಯಿತು? ನನ್ನ ಜಾತಿಯವರು ಒಬ್ಬರೂ ಕಾಣಿಸುವುದಿಲ್ಲವಲ್ಲ? ನಿನ್ನ ಸಂದೇಶವು ಸುಳ್ಳಾಯಿತೇ? ಎಂದು ಕೂಗಿಕೊಳ್ಳ

ತೊಡಗಿದನು. ರಾತ್ರಿ ಸ್ವಪ್ನದಲ್ಲಿ–ನಿನ್ನ ದೇಶವು ಯುರೋಪದಂತೆ ಆಗಿದೆ. ನೀನು ಮೊದಲು ಇದನ್ನೇ ಬಯಸಿದುದು, ನಿನ್ನ ದೇಶದಸ್ಥಿತಿಯು ಯುರೋಪದಂತೆ ಆಗಿಲ್ಲವೇ? ಹಾಗೆಯೇ ಕೋಟು, ಪಾಟ್ಲೋನು, ಬೂಟು, ಹ್ಯಾಟು, ನೆಕ್ಟಾಯ್, ಕಾಲರುಗಳನ್ನು ಧರಿಸಿದ ಜನರು, ಹಾಗೆಯೇ ಪಟ್ಟಣಗಳು, ಮಾರ್ಗಗಳು, ಬಂದರಗಳು, ಕಾರಖಾನೆಗಳು, ಮಂದಿರಗಳು, ಮನೆಗಳು, ಕುದುರೆಗಾಡಿಗಳು ಇವೆಲ್ಲವೂ ಆಗಿವೆಯಲ್ಲವೇ? ನೀನು ಮನಸ್ಸಿನಲ್ಲಿ ಏನೇನು ಆಗಬೇಕೆಂದು ಮಾಡಿಕೊಂಡು ನನ್ನ ಬಳಿಯಲ್ಲಿ ಕೇಳಿಕೊಂಡೆಯೋ ಅದೆಲ್ಲವೂ ಆಗಿದೆ. ಕೇವಲ ದೇಶದ ಉನ್ನತಿಯೆಂದರೆ ಅದರಲ್ಲಿ ದೇಶವಾಸಿಗಳ ಉನ್ನತಿಯ ಸಮಾವೇಶವಾಗುವುದಿಲ್ಲ ಎಂದು ಪರಮೇಶ್ವರನ ಸಂದೇಶವು ಬಂದಂತೆ ಭಾಸವಾಯಿತು.

ಅಮೇರಿಕದ ಇಂಡಿಯನ್ನನಂತೆ ನಮಗೂ ಕೇವಲ ದೇಶದ ಉನ್ನತಿಯು ಬೇಡ; ಅದನ್ನು ಬಯಸಿದರೆ ಮಾರ್ಗ, ಕಾರಖಾನೆ, ರೇಲ್ವೆ, ಬಂದರ, ತಂತಿಯ ಟಪಾಲು, ಉದಿಗೆತೊಡಿಗೆ ಇವುಗಳ ಉನ್ನತಿಯನ್ನು ಮಾತ್ರ ಬಯಸಿದಂತಾಗುವುದು. ನಾವು ನಮ್ಮ ದೇಶದ ಜನರ ಮತ್ತು ಧರ್ಮದ ಉನ್ನತಿಯನ್ನು ಬಯಸಬೇಕು. ಧರ್ಮವೇ ನಮ್ಮ ಆತ್ಮೋನ್ನತಿಯನ್ನುಂಟು ಮಾಡುವುದು. ಬಾಹ್ಯವಿಷಯಗಳಲ್ಲಿರುವ ನಾಗರಿಕತೆಯು ಒಂದುತರದ ವಿಲಾಸವೇ ಹೊರತು ಅದು ಜನಾಂಗದ ಜೀವಿನೀಶಕ್ತಿಯನ್ನು ದೃಢಪಡಿಸಲಾರದು. ಯುರೋಪಿಯನ್ನರಲ್ಲಿ ಕಂಡು ಬರುವ ದೀರ್ಘಾಯುಷ್ಯ, ಸ್ವದೇಶಪ್ರೇಮ, ಸಮಾಜದ ಸಲುವಾಗಿ ಆತ್ಮಾರ್ಪಣ, ಕಾರ್ಯಕಾರಿತ್ವ, ಒಕ್ಕಟ್ಟು ಮೊದಲಾದ ಗುಣಗಳು ಅವರ ಬಾಹ್ಯವಿಲಾಸವು ಎಷ್ಟು ಹೆಚ್ಚಾಗಿದ್ದರೂ ಅವರ ಆತ್ಮೋನ್ನತಿಯು ಎಷ್ಟು ಮಟ್ಟಿಗೆ ಆಗಿರುವುದೆಂಬುದನ್ನು ತೋರ್ಪಡಿಸುವುದು.

---

ಶಿಸ್ತು.

## ೬೮. ನಿಪ್ಪಾಣಿಯ ಅಪ್ಪಾಸಾಹೇಬ.

ಮಹಾರಾಷ್ಟ್ರರಾಜ್ಯದ ಆಳಿಗಾಲದಲ್ಲಿ ನಿಪ್ಪಾಣಿಯಲ್ಲಿ ಅಪ್ಪಾಸಾಹೇಬನೆಂಬ ಶೂರಪುರುಷನು ಆಗಿಹೋದನು. ಒಂದಾನೊಂದು ದಿವಸ ಆತನ ಮನೆಯಲ್ಲಿ ಕೀರ್ತನವಾಯಿತು. ಅಪ್ಪಾಸಾಹೇಬನು ಕೀರ್ತನ ಕೇಳುವುದಕ್ಕೆ ಕುಳಿತುಕೊಂಡಿದ್ದನು. ಆತನ ಇದಿರಿಗೆ ಕಂಬಕ್ಕೆ ಆಂತು ಆತನ ಕಾರಕೂನನೊಬ್ಬನು ಕುಳಿತಿದ್ದನು. ಆ ಕಾರಕೂನನ ಅಂಗಿಯಲ್ಲಿ ಒಂದು ತಗುಣೆ

ಸೇರಿತ್ತು. ಆದುದರಿಂದ ಆತನು ಮೇಲೆ ಮೇಲೆ ಬೆನ್ನನ್ನು ತುರಿಸಿಕೊಳ್ಳುತ್ತ ಮೈಯನ್ನು ಅಲ್ಲಾಡಿಸುತ್ತಿದ್ದನು. ಅದೇ ದಿವಸ ಅಪ್ಪಾಸಾಹೇಬನ ‘ಪಾಗೊಟಿ’ (ಪಾಗು)ಯಲ್ಲಿ ದೊಡ್ಡದೊಂದು ಚೇಳು ಸೇರಿತ್ತು. ಊಳಿಗದವನು ಆ ಪಾಗೋಟಿಯನ್ನು ನೋಡದೆ ಹಾಗೇ ತಂದುಕೊಟ್ಟಿದ್ದನು. ಅಪ್ಪಾಸಾಹೇಬನೂ ಅವಸರದಲ್ಲಿ ಹಾಗೆಯೇ ತಲೆಯಮೇಲಿಟ್ಟುಕೊಂಡಿದ್ದನು. ಕೀರ್ತನಕ್ಕೆ ಆರಂಭವಾದಾಗಿನಿಂದ ಆ ಚೇಳು ಮೇಲೆ ಮೇಲೆ ತಲೆಗೆ ಹೊಡೆಯುತ್ತಲೇ ಇತ್ತು. ಅಪ್ಪಾಸಾಹೇಬನು ಸಹಿಸಿಕೊಳ್ಳುತ್ತಲೇ ಇದ್ದನು. ಕೀರ್ತನವು ಮುಗಿದ ಬಳಿಕ ಅಪ್ಪಾಸಾಹೇಬನು ಆ ಕರಣಿಕನನ್ನು ಕರೆದು—ಕೀರ್ತನ ನಡೆದಾಗಲೆಲ್ಲ ನಿನ್ನ ಗೊಂದಲವೇನು ನಡೆದಿತ್ತು? ಎಂದು ಕೇಳಲು ಆತನು ಒಡೆಯರೇ, ಅಂಗಿಯಲ್ಲಿ ತಗಣಿ ಸೇರಿದುದರಿಂದ ಹಾಗಾಯಿತೆಂದು ಹೇಳಿದನು. ಬಳಿಕ ಅಪ್ಪಾಸಾಹೇಬನು ತಲೆಯಮೇಲಿನ ಪಾಗೋಟಿಯನ್ನು ಕೆಳಗೆ ಜಾಡಿಸಿದನು. ಅದರೊಳಗಿಂದ ದೊಡ್ಡದೊಂದು ಚೇಳು ಹೊರಬಿತ್ತು. ಆಗ ಅಪ್ಪಾಸಾಹೇಬನು ಆ ಕರಣಿಕನಿಗೆ—ಮರುಳಾ ಸಣ್ಣದೊಂದು ತಗಣಿಯ ಕಡಿತಕ್ಕೆ ನೀನು ಇಷ್ಟು ಗೊಂದಲವನ್ನು ಮಾಡಿದೆ; ಇದು ನೋಡು, ಆಗಿನಿಂದ ಒಂದೇ ಸಮನೆ ನನ್ನ ತಲೆಗೆ ಕಡಿಯುತ್ತಿದೆ! ಎಂದು ಚೇಳನ್ನು ತೋರಿಸಿದನು. ಓಲಗದ ‘ಶಿಸ್ತು’ ಗಾಗಿ ಇಷ್ಟು ವೇದನೆಯನ್ನು ಅನುಭೋಗಿಸಿದ ಅಪ್ಪಾಸಾಹೇಬನ ತಾಳ್ಮೆಗೆ ಅಲ್ಲಿದ್ದವರೆಲ್ಲ ಬೆರಗಾದರು.

---

ಉತ್ಕರ್ಷದ ಉಪಾಯ.

## ೬೯. ಅಮೇರಿಕದ ಗ್ರ್ಯಾಜುಯೇಟ್.

ಅಮೇರಿಕದ ಪ್ರಸಿದ್ಧ ವಿಶ್ವವಿದ್ಯಾಲಯದ ಪದವೀಧರ (ಗ್ರ್ಯಾಜುಯೇಟ) ನಾದ ಒಬ್ಬ ತರುಣನು ದಾರಿದ್ರ್ಯಪೀಡಿತನಾದುದರಿಂದ ಒಬ್ಬ ದೊಡ್ಡ ವ್ಯಾಪಾರಿಯ ಅಂಗಡಿಗೆ ನೌಕರಿಯನ್ನು ಬೇಡಹೋದನು. ವ್ಯಾಪಾರಿಯು ನಿನಗೆ ತಕ್ಕ ಸ್ಥಳವು ಯಾವುದೂ ತೆರವಿಲ್ಲವೆಂದು ಹೇಳಿದನು. ತರುಣನು ಯಾವ ಸ್ಥಳವು ತೆರವಿದ್ದರೂ ಅದನ್ನು ದಯಮಾಡಿ ಕೊಡಿರಿ; ನನಗೆ ನಿಜವಾಗಿ ಅನ್ನಕ್ಕೇ ಗತಿಯಿಲ್ಲದಾಗಿದೆಯೆಂದು ಕೇಳಿಕೊಂಡನು. ಆಗ ವ್ಯಾಪಾರಿಯು ಬಂದವರೆಲ್ಲ ಮೊದಲು ಯಾವ ಕೆಲಸವನ್ನಾದರೂ ಮಾಡುವೆವೆಂದು ಹೇಳುವರು; ಕೆಲಸ ಕೊಟ್ಟಬಳಿಕ ಅದು ಅವರ ಮನಸ್ಸಿಗೆ ಬರುವದಿಲ್ಲ

ಎಂದನು. ತರುಣನು ತಾವು ಹೇಳುವುದು ನಿಜವೇ ಸರಿ. ಆದರೆ ನನ್ನ ಕೈಯಲ್ಲಿ ಒಂದು ಕಾಸು ಕೂಡ ಇಲ್ಲ, ಈಪ್ರೊತ್ತು ಯಾವ ಕೆಲಸವು ದೊರೆತರೂ ಅದನ್ನೇ ದೇವರು ನನಗಾಗಿ ಕಾದಿಟ್ಟಿರುವನೆಂದು ತಿಳಿಯುವೆನು, ಎಂದು ಹೇಳಿದನು. ಆಗ ವ್ಯಾಪಾರಿಯು ಹುಡುಗನು ಗಟ್ಟಿಗನೆಂದು ತೋರುತ್ತದೆ. ಇಷ್ಟುಮಟ್ಟಿಗೆ ಮನಸ್ಸನ್ನು ದೃಢಮಾಡಿಕೊಳ್ಳುವುದು ಎಲ್ಲರಿಗೆ ಸಾಧ್ಯವಿಲ್ಲ ಎಂದು ಆಲೋಚಿಸಿ ಆ ತರುಣನನ್ನು ಕುರಿತು—ನಮ್ಮ ಆಫೀಸಿಗೆ ಬರುವ ಮಾರ್ಗವನ್ನು ದುರುಸ್ತು ಮಾಡುವ ಕೆಲಸವು ನಡೆದಿದೆ; ಕೂಲಿಕಾರರು ಕೆಲಸ ಮಾಡುತ್ತಿರುವರು; ನೀನೂ ಅವರೊಡನೆ ಕೆಲಸ ಮಾಡಲು ಒಪ್ಪುವೆಯಾ ಎಂದು ಕೇಳಿದನು. ತರುಣನು ಆಗಬಹುದೆಂದು ಒಪ್ಪಿಕೊಂಡನು. ವ್ಯಾಪಾರಿಯು ಆತನನ್ನು ಕೆಲಸಕ್ಕೆ ಕಳುಹಿ, ಮೊಕಾದಮ್ಮನಿಗೆ ಮೇಲ್ವಿಚಾರಣೆ ಮಾಡಹೇಳಿದನು. ತರುಣನು ತನ್ನ ಪಾಲಿಗೆ ಬಂದ ರಸ್ತೆಯ ಭಾಗವನ್ನು ಗುರುತುಮಾಡಿಕೊಂಡು ಕೆಲಸವನ್ನಾರಂಭಿಸಿದನು. ದಾರಿಯಲ್ಲಿರುವ ತಗ್ಗುದಿನ್ನೆಗಳನ್ನು ಸಮಮಾಡಿ, ಗಟ್ಟಿಮಾಡತಕ್ಕ ಭಾಗವನ್ನು ಗಟ್ಟಿಮಾಡಿ, ತನ್ನ ಪಾಲಿನ ರಸ್ತೆಯನ್ನು ಬಹಳಚೆನ್ನಾಗಿ ಮಾಡಿದನು. ಸಾಯಂಕಾಲ ವ್ಯಾಪಾರಿಯು ಗಾಡಿಯ ಮೇಲೆ ಕುಳಿತುಕೊಂಡು ಮನೆಗೆ ನಡೆದಾಗ ಆ ತರುಣನ ಪಾಲಿಗೆ ಬಂದ ರಸ್ತೆಯ ಭಾಗವನ್ನು ಬಿಟ್ಟು ಉಳಿದ ಕಡೆಯಲ್ಲಿ ಗಾಲಿಗೆ ಕಲ್ಲು ಹತ್ತಿ ಇಲ್ಲವೆ ಅದು ತಗ್ಗಿನಲ್ಲಿ ಇಳಿದು ಗಾಡಿಗೆ ಧಕ್ಕೆ ಹತ್ತುತ್ತಿತ್ತು. ಇದನ್ನು ಕಂಡು ವ್ಯಾಪಾರಿಯು ಸುಶಿಕ್ಷಿತನೂ ಸಭ್ಯನೂ ಆದ ಮನುಷ್ಯನ ಕೆಲಸವು ಈ ಮೇರೆಗೆ ಚೆನ್ನಾಗಿರುವುದು ಸಹಜವೆಂದು ಸಂತೋಷಪಟ್ಟು, ಮರುದಿವಸ ಆತನಿಗೆ ಮೊದಲಿನ ದಿವಸದ ಎರಡರಷ್ಟು ಕೂಲಿಯಿಂದ ಕೂಲಿಕಾರರ ಮೇಲ್ವಿಚಾರಣೆ ಮಾಡುವ ಮೊಕಾದಮ್ಮನ ಕೆಲಸವನ್ನು ಹೇಳಿದನು. ತರುಣನು ಆ ಕೆಲಸವನ್ನು ಮನಮುಟ್ಟಿ ಮಾಡಿದನು. ಆಸ್ಥೆ, ಪರಿಶ್ರಮ ಇವು ಅವನ ಕೆಲಸದಲ್ಲಿ ಸ್ಪಷ್ಟವಾಗಿ ತೋರುತ್ತಿದ್ದುವು. ವ್ಯಾಪಾರಿಯು ಕ್ರಮದಿಂದ ಬೇರೆಬೇರೆ ಕೆಲಸಗಳ ಮೇಲ್ವಿಚಾರಣೆಯನ್ನು ಹೇಳತೊಡಗಿದನು. ಮುಂದೆ ಈ ತರುಣನು ಆ ವ್ಯಾಪಾರಿಯ ಪಾಲುಗಾರನೂ, ಮುಖ್ಯ ಮೇಲ್ವಿಚಾರಕ (ಮ್ಯಾನೇಜರ) ನೂ ಆದನು. ಎಲ್ಲರಿಗೂ ಈ ತರದ ಉತ್ಕರ್ಷವು ದೊರೆತೀತೆಂಬ ನಿಯಮವಿಲ್ಲದಿದ್ದರೂ, ಎಲ್ಲರೂ ತಮ್ಮ ತಮ್ಮ ಕರ್ತವ್ಯಗಳನ್ನು ಉತ್ತಮವಾಗಿ ಮಾಡಲೇಬೇಕೆಂಬುದು ನಿರ್ವಿವಾದವಾದುದು.

---

ಧರ್ಮೋ ರಕ್ಷತಿ ರಕ್ಷಿತಃ

## ೭೦. ಧರ್ಮರಾಜ.

'ಧರ್ಮೋ ರಕ್ಷತಿ ರಕ್ಷಿತಃ'—ನಾವು ಧರ್ಮವನ್ನು ಕಾಪಾಡಿಕೊಂಡರೆ ಧರ್ಮವು ನಮ್ಮನ್ನು ಕಾಪಾಡುವುದು. ಧರ್ಮಮೂರ್ತಿಯಾದ ಯುಧಿಷ್ಠಿರ ಮಹಾರಾಜನು ಅತ್ಯಂತ ಧಾರ್ಮಿಕನೆಂಬುದು ಹಲವು ಸಾರೆ ಪರೀಕ್ಷಿಸಲ್ಪಟ್ಟಿರುವುದು. ಆತನು ಯಾವಾಗಲೂ ಧರ್ಮವನ್ನು ಸ್ವಲ್ಪವೂ ಬಿಡದೆ ಪಾಲಿಸುತ್ತಿದ್ದುದರಿಂದ ಸಂಕಟಸಮಯದಲ್ಲಿಯೂ ಅದನ್ನು ಬಿಡದೆ ಕಾಪಾಡಿಕೊಳ್ಳುವುದು ಅವನಿಗೆ ಶಕ್ಯವಾಗುತ್ತಿದ್ದಿತು. ಮತ್ತು ಈ ಕಾರಣದಿಂದಲೇ ಆತನು ಎಲ್ಲ ವಿಪತ್ತುಗಳಿಂದ ಪಾರಾಗುತ್ತಿದ್ದನು.

(೧) ಒಂದು ಸಮಯದಲ್ಲಿ ನೀರನ್ನು ತರುವುದಕ್ಕೆ ಹೋಗಿ ಯಕ್ಷನ ಪ್ರಶ್ನೆಗಳಿಗೆ ಉತ್ತರವನ್ನು ಹೇಳದೆ ನೀರನ್ನು ಮುಟ್ಟಿದ ಭೀಮ, ಅರ್ಜುನ, ನಕುಲ, ಸಹದೇವರು ಮೃತಪ್ರಾಯರಾಗಿ ಬಿದ್ದಾಗ ಧರ್ಮರಾಜನು ವಾರ್ತಾಕಾ? (ಸುದ್ದಿಯಾವುದು) ಮೊದಲಾದ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡಲು, ಯಕ್ಷನು ಸಂತುಷ್ಟನಾಗಿ ನಿನ್ನ ತಮ್ಮಂದಿರಲ್ಲೊಬ್ಬನನ್ನು ಬದುಕಿಸುತ್ತೇನೆಂದು ವರವ ಕೊಟ್ಟನು. ಆಗ ಧರ್ಮರಾಜನು ಎಲ್ಲರಿಗಿಂತ ಹೆಚ್ಚಿಗೆ ಸಾಮರ್ಥ್ಯವುಳ್ಳವನೂ, ವಿಧೇಯನೂ ಆದ ಅರ್ಜುನನನ್ನು ಬದುಕಿಸ ಹೇಳದೆ ತನ್ನ ಮಲತಾಯಿಯ ಮಗನಾದ ನಕುಲನನ್ನು ಬದುಕಿಸ ಹೇಳಿದನು. ಈ ಧರ್ಮವಿಚಾರವನ್ನು ಕಂಡು ಯಕ್ಷರೂಪಿಯಾದ ಯಮನು ಸಂತುಷ್ಟನಾಗಿ ನಾಲ್ವರು ತಮ್ಮಂದಿರನ್ನೂ ಬದುಕಿಸಿದನು.

(೨) ಒಂದು ದಿವಸ ಗಾಂಧಾರಿಯು ಧರ್ಮರಾಜನನ್ನು ಕುರಿತು:—ಭೀಮಸೇನನನ್ನೂ ದುರ್ಯೋಧನನನ್ನೂ ನನ್ನ ಬಳಿಗೆ ಕಳುಹಿಕೊಡು, ನಾನು ಈಗ ಶಿವಮಂದಿರಕ್ಕೆ ಹೋಗುವೆನು. ಅಲ್ಲಿ ಶಿವಪೂಜೆಯನ್ನು ಮಾಡಿ ಅವರನ್ನು ನೋಡಿದರೆ ಅವರ ಶರೀರವು ದೃಢವಾಗುವುದು ಎಂದು ಹೇಳಿದಳು. ಧರ್ಮರಾಜನು ಇಬ್ಬರನ್ನೂ ಕುರಿತು—ನೀವು ಬತ್ತಲೆಯಾಗಿ ಗುಡಿಯಲ್ಲಿ ಹೋಗಿರಿ, ಎಲ್ಲ ಶರೀರವೂ ದೃಢವಾಗುವುದು. ತಾಯಿಯ ಬಳಿಯಲ್ಲಿ ಮಕ್ಕಳು ನಾಚುವ ಕಾರಣವಿಲ್ಲ ಎಂದು ಹೇಳಿದನು. ತಾನು ಬಲ್ಲವನೆಂಬ ಹೆಮ್ಮೆಯುಳ್ಳ ದುರ್ಯೋಧನನು ಚಡ್ಡಿಯನ್ನು ಹಾಕಿಕೊಂಡು ಹೋದನು. ಮತ್ತು ಧರ್ಮರಾಜನ ಮಾತನ್ನು ಮೀರಿ ನಡೆದು ತಾನು ಬುದ್ಧಿವಂತಿಕೆಯನ್ನು ಮಾಡಿದೆನೆಂದು ತಿಳಿದು

ಕೊಂಡಿದ್ದನು. ಗಾಂಧಾರಿಯ ದೃಷ್ಟಿಯು ಆ ಸ್ಥಳದಲ್ಲಿ ಅರಿವೆಯ ಮೇಲೆ ಬಿದ್ದ ದರಿಂದ ಅಷ್ಟು ಸ್ಥಳವು ಚೆನ್ನಾಗಿ ದೃಢವಾಗಲಿಲ್ಲ. ಅಣ್ಣನಿಗೆ ವಿಧೇಯನಾಗಿದ್ದ ಭೀಮಸೇನನು ಆತನ ಅಪ್ಪಣೆಯಂತೆ ಬತ್ತಲೆಯಾಗಿಯೇ ಹೋಗಿದ್ದನು. ಅವನ ಎಲ್ಲ ಶರೀರವು ದೃಢವಾಯಿತು. ಧರ್ಮರಾಜನು ದುರ್ಯೋಧನನಿಗೊಂದು ರೀತಿಯಾಗಿ, ಭೀಮಸೇನನಿಗೊಂದು ರೀತಿಯಾಗಿ ಹೇಳಿರಬಹುದೆಂದು ತಿಳಿದು ಗಾಂಧಾರಿಯು ಆತನಿಗೆ ಶಾಪಕೊಡಲುದ್ಯುಕ್ತಳಾಗಿದ್ದಳು. ಆಗ ದುರ್ಯೋಧನನು ತನ್ನದೇ ತಪ್ಪೆಂದು ಒಪ್ಪಿಕೊಂಡನು. ಈ ತಪ್ಪಿನಿಂದಲೇ ಕೊನೆಗೆ ಅವನ ಅಂತ್ಯವಾಯಿತು. ಇಲ್ಲವಾದರೆ ಗದಾಯುದ್ಧದಲ್ಲಿ ಆತನ ತೊಡೆ ಮುರಿಯುತ್ತಿರಲಿಲ್ಲ. ದುರ್ಯೋಧನನು ತನ್ನ ಚಿಕ್ಕಪ್ಪನ ಮಕ್ಕಳಾದ ಪಾಂಡವರನ್ನು ಒಳ್ಳೆಯ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಆದರೆ ಧರ್ಮರಾಜನು ಈ ಸಮಯದಲ್ಲಿ ಧರ್ಮವನ್ನು ಬಿಡದೆ ಇಬ್ಬರಿಗೂ ಒಂದೇವಿಧವಾಗಿ ಗಾಂಧಾರಿಯ ಅಪ್ಪಣೆಯನ್ನು ಹೇಳಿದ್ದನು.

(೩) ಪಾಂಡವರು ಸ್ವರ್ಗಾರೋಹಣಕ್ಕೆ ಹೊರಡಲು, ಅವರ ಸಂಗಡ ಹಸ್ತಿನಾವತಿಯಿಂದಲೇ ಒಂದು ನಾಯಿಯೂ ಹೊರಟಿತ್ತು. ಹೆಂಡತಿಯೂ, ತಮ್ಮಂದಿರೂ ಒಬ್ಬೊಬ್ಬರೇ ಆ ಪರ್ವತಮಾರ್ಗದಲ್ಲಿ ಸತ್ತುಬೀಳಲು, ಕೊನೆಗೆ ಧರ್ಮರಾಜನೊಬ್ಬನೇ ಸ್ವರ್ಗದ್ವಾರಕ್ಕೆ ಬಂದು ಮುಟ್ಟಿದನು. ನಾಯಿ ಮಾತ್ರ ಸಂಗಡವೇ ಇದ್ದಿತು. ಅಲ್ಲಿ ದ್ವಿಜರೂಪಿಯಾದ ಇಂದ್ರನು—ನಾಯಿಯನ್ನು ಬಿಟ್ಟು ಸ್ವರ್ಗವನ್ನು ಪ್ರವೇಶಿಸು; ಅಸ್ಪೃಶ್ಯವಾದ ನಾಯಿಯನ್ನು ಸ್ವರ್ಗಲೋಕದಲ್ಲಿ ಸೇರಗೊಡುವುದು ಎಂದೂ ಶಕ್ಯವಿಲ್ಲ ಎಂದು ಹೇಳಿದನು. ಧರ್ಮರಾಜನು ನಾಯಿಯನ್ನು ಬಿಟ್ಟು ಸ್ವರ್ಗದೊಳಗೆ ಹೋಗಲಾರೆನೆಂದು ಹೇಳಿದನು. ಆಗ ದ್ವಿಜರೂಪಿಯಾದ ಇಂದ್ರನು—ಹೆಂಡತಿಯನ್ನೂ ತಮ್ಮಂದಿರನ್ನೂ ಬಿಟ್ಟು ಇಲ್ಲಿಯ ವರೆಗೆ ಬಂದವನು ನಾಯಿಯನ್ನು ಬಿಟ್ಟು ಒಳಗೆ ಏಕೆ ಹೋಗಬಾರದೆಂದು ಆಕ್ಷೇಪಿಸಿದನು. ಆಗ ಧರ್ಮರಾಜನು ಹಾಗೆ ಹೋಗಲಾರೆನೆಂದು ಮತ್ತೆ ಹೇಳಿದುದಲ್ಲದೆ—"ಜೀವವು ದೇಹವನ್ನು ಆಶ್ರಯಿಸಿಕೊಂಡೇ ಇರುವುದಾದರೂ ಜೀವವು ಹೋದ ಬಳಿಕ ಮೃತದೇಹದಿಂದೇನು? ಅವರು ಮೃತರಾದುದರಿಂದ ಅವರನ್ನು ಬಿಟ್ಟು ಬಂದೆನು. ಜೀವಂತ ಸಹಚರನು ಎಷ್ಟು ಹೀನನಿದ್ದರೂ ಆತನನ್ನು ಬಿಡುವುದು ಧರ್ಮವಲ್ಲ" ಎಂದು ಹೇಳಿದನು.

ನಾಯಿಯು ಸಲುವಾಗಿ ಸ್ವರ್ಗಸುಖವನ್ನು ಕೂಡ ಲೆಕ್ಕಿಸದಿರುವ ಧರ್ಮರಾಜನ ಧರ್ಮಬುದ್ಧಿಗೆ ಸಂತುಷ್ಟನಾಗಿ ಯಮನು ನಾಯಿಯ ರೂಪವನ್ನು ಬಿಟ್ಟು ಈತನು ಸ್ವರ್ಗಪ್ರವೇಶ ಮಾಡಲರ್ಹನು ಎಂದು ಇಂದ್ರನಿಗೆ ಹೇಳಿದನು. ಇಂದ್ರನು ಆತನನ್ನು ಸ್ವರ್ಗದಲ್ಲಿ ಕರೆದುಕೊಂಡನು.

(೪) ಧರ್ಮರಾಜನ ಇಡಿ ಆಯುಷ್ಯದಲ್ಲಿ ಒಂದು ದೋಷವು ಮಾತ್ರ ತಟ್ಟಿತು. ಅಭಿಮನ್ಯುಬಾಲಕನನ್ನು ಅನ್ಯಾಯದಿಂದ ಯುದ್ಧದಲ್ಲಿ ಕೊಂದ ದ್ರೋಣಾಚಾರ್ಯರನ್ನು ಕುರಿತು 'ಅಶ್ವತ್ಥಾಮಾ ಹತಃ' ಎಂದು ಗಟ್ಟಿಯಾಗಿ ಹೇಳಿ 'ಗಜಃ' ಎಂದು ಮೆಲ್ಲನೆ ನುಡಿದನು. ಜನರ ಆಗ್ರಹಕ್ಕೋಸ್ಕರ ಹೀಗೆ ಹೇಳಿದ್ದರೂ ಆ ದೋಷದಿಂದ ಧರ್ಮರಾಜನಿಗೆ ಒಮ್ಮೆ ನರಕದರ್ಶನ ವಾಯಿತು. ಇಂದ್ರನ ಮಾಯೆಯಿಂದ ಕತ್ತಲೆಗವಿದ ಆ ದುರ್ಗಂಧಮಯವಾದ ನರಕದಲ್ಲಿ ದ್ರೌಪದಿ, ಭೀಮ, ಅರ್ಜುನ, ನಕುಲ, ಸಹದೇವರು ಗೋಳಿಡು ತ್ತಿರುವಂತೆ ಕೇಳಿಸಿತು. ಧರ್ಮರಾಜನ ಆ ದೋಷಕ್ಕೆ ನರಕದರ್ಶನ ಮಾತ್ರವೇ ಫಲವು; ಈಗ ಆತನು ಮರಳಿ ಸ್ವರ್ಗಕ್ಕೆ ಹೋಗಬಹುದಾಗಿದ್ದಿತು. ಇಂದ್ರನು ಹಾಗೆ ಮಾಡಹೇಳಲು, ಧರ್ಮರಾಜನು—ತಮ್ಮಂದಿರು ನರಕದಲ್ಲಿ ತೊಳಲಾಡು ತ್ತಿರಲು, ತಾನೊಬ್ಬನೇ ಸ್ವರ್ಗಸುಖವನ್ನು ಅನುಭೋಗಿಸಲಾರೆನೆಂದು ಹೇಳಿ ದನು. ಆಗ ಇಂದ್ರನು ಇದೆಲ್ಲ ನಿನ್ನ ಪರೀಕ್ಷೆಗಾಗಿ ಮಾಡಿದ ಮಾಯೆಯೆಂದು ಹೇಳಿ ಧರ್ಮರಾಜನಿಗೆ ಸ್ನಾನಮಾಡಿಸಿ ದಿವ್ಯಶರೀರವನ್ನು ಕೊಟ್ಟು ಸ್ವರ್ಗದಲ್ಲಿ ಆತನ ತಮ್ಮಂದಿರು ಇರುವಲ್ಲಿಗೆ ಕರೆದೊಯ್ದನು.

---

ಒಡೆಯನ ಮೇಲೆ ಪ್ರೀತಿ.

## ೭೧. ಡೇವ್ಹಿಡ್ ರಾಜ.

ಯಹೂದಿಗಳ ಇತಿಹಾಸದಲ್ಲಿ ಡೇವ್ಹಿಡ್‌ರಾಜನ ಕಥೆಯು ಬಹು ಮನೋಹರವಾದುದು. ಆತನು ಕವಿಯೂ, ಗಾಯಕನೂ, ದೇವಭಕ್ತನೂ ಆಗಿದ್ದುದಲ್ಲದೆ ದೂರದೃಷ್ಟಿಯ ರಾಜನೀತಿನಿಪುಣನೂ, ಶೂರಭಟನೂ ಆಗಿ ದ್ದನು. ಆತನ ಆಕೃತಿ ಸಣ್ಣದಾಗಿದ್ದರೂ ಕೃತಿ ದೊಡ್ಡದು. ಯಹೂದಿಗಳ ಹಗೆ ಯಾದ ಗೋಲಿಯಾಥ್ ಎಂಬ ಶೂರನನ್ನು ಈತನು ಸಹಜವಾಗಿ ಕೊಂದುದ ರಿಂದ ಸಾಲ ರಾಜನು ಸಂತುಷ್ಟನಾಗಿ ಈತನಿಗೆ ತನ್ನ ಮಗಳನ್ನು ಕೊಟ್ಟನು. ಕೆಲವು ದಿವಸಗಳ ತರುವಾಯ ಸಾಲ ರಾಜನು ಡೇವ್ಹಿಡನ ಮೇಲೆ ಸಿಟ್ಟಾಗಿ ಆತ ನನ್ನು ಕೊಲ್ಲಿಸುವ ಪ್ರಯತ್ನವನ್ನು ನಡೆಸಿದನು. ಅಡವಿಯಲ್ಲಿ ಪರ್ವತಗಳ

ಗವಿಯ ಹೊರತು ಡೆವ್ಹಿಡನಿಗೆ ಬೇರೆ ಆಶ್ರಯಸ್ಥಾನಗಳಿರಲಿಲ್ಲ. ಸಾಲರಾಜನು ಈಗ ತನ್ನ ಮಗಳನ್ನು ಇನ್ನೊಬ್ಬನಿಗೆ ಮದುವೆಮಾಡಿ ಕೊಟ್ಟನು. ಈ ಸಂಕಟ ಕಾಲದಲ್ಲಿ ಡೇವ್ಹಿಡನಿಗೆ ಅಡವಿಯಲ್ಲಿ ಕೆಲವು ಜನ ಕಳ್ಳರೊಡನೆ ಪರಿಚಯವಾಯಿತು. ಡೇವ್ಹಿಡನ ಕೈಕೆಳಗೆ ಅವರು ಶೂರ ಸೈನಿಕರಾದರು. ಅವರು ದುರ್ಬಲರನ್ನು ಕೊಳ್ಳೆಹೊಡೆದು ಉಪಜೀವಿಸುವುದನ್ನು ಬಿಟ್ಟರು. ಡೇವ್ಹಿಡನ ಮೇಲೆ ಬಹಳ ಪ್ರೀತಿಯುಳ್ಳವರಾದರು. ಹೀಗಿರುವಾಗ ಒಂದಾನೊಂದು ದಿವಸ ಮಾತಾಡುತ್ತ ಕುಳಿತಿರುವಾಗ ಡೇವ್ಹಿಡನು—ಬೇಥಲೇಹೇಮ್ ನಗರದ ಹೊರಗೆ ಇರುವ ಬಾವಿಯ ನೀರಿನಷ್ಟು ಉತ್ತಮವಾದ ಸವಿನೀರನ್ನು ನಾನು ಎಂದೂ ಕುಡಿದಿಲ್ಲ; ಈ ಬೇಸಗೆಯಲ್ಲಿ ಆ ನೀರು ದೊರೆತರೆ ಅದು ಎಷ್ಟು ಉತ್ಕೃಷ್ಟವಾಗಿರುವುದೆಂಬುದನ್ನು ನೀವು ಮನಗಾಣುವಿರಿ ಎಂದು ಹೇಳಿದನು. ಅಡವಿಯೊಳಗೆ ಇವರು ಇರುವ ಗವಿಗೂ ಬೇಥಲೇಹೇಮ್ ಪಟ್ಟಣಕ್ಕೂ ನಡುವೆ ಶತ್ರುಗಳದೊಂದು ದೊಡ್ಡ ಸೈನ್ಯವು ಪಾಳಯವನ್ನು ಹಾಕಿತ್ತು; ಮತ್ತು ಸಾಲ ರಾಜನ ಕಡೆಯವರು ಡೇವ್ಹಿಡನನ್ನು ಸುತ್ತಲು ಹುಡುಕುತ್ತಿದ್ದರು. ಆಗ ಆ ಗುಪ್ತವಾದ ಗವಿಯಿಂದ ಹೊರಹೊರಡುವುದು ಯೋಗ್ಯವಾಗಿರಲಿಲ್ಲ. ಆದರೆ ಡೇವ್ಹಿಡನ ಕೈಕೆಳಗಿನ ಮೂವರು-ತಮ್ಮ ಒಡೆಯನಾದ ಡೇವ್ಹಿಡನ ಸಲುವಾಗಿ ಆ ನೀರನ್ನು ತಾವು ತರಲೇಬೇಕು, ಈ ಕೆಲಸದಲ್ಲಿ ತಮ್ಮ ಪ್ರಾಣವು ಹೋದರೂ ಅಡ್ಡಿಯಿಲ್ಲವೆಂದು ನಿರ್ಣಯಿಸಿ ಯಾರಿಗೂ ತಿಳಿಸದೆ ಆ ಗವಿಯಿಂದ ಹೊರಟು ಹೋದರು. ಕೆಲವೆಡೆಯಲ್ಲಿ ಯುದ್ಧ ಮಾಡಿ ಕೆಲವೆಡೆಯಲ್ಲಿ ಹಲವು ತರದ ಸಂಕಟದೊಳಗಿಂದ ಪಾರಾಗಿ ಅವರು ಆ ನೀರನ್ನು ಸಂಪಾದಿಸಿಕೊಂಡು ಮರಳಿ ಬಂದರು. ಅವರ ಭಕ್ತಿ ವಿಶ್ವಾಸಗಳನ್ನು ಕಂಡು ಡೇವ್ಹಿಡನು ಮೆಚ್ಚಿ ಅವರನ್ನು ಅಪ್ಪಿಕೊಂಡನು. ಮತ್ತು ಆ ನೀರನ್ನು ದೇವರ ಹೆಸರಿನಿಂದ ನೆಲದ ಮೇಲೆ ಸುರಿದು—ನಾನು ನನ್ನ ಪ್ರಿಯ ಬಂಧುಗಳ ರಕ್ತವನ್ನು ಕುಡಿಯಲೆಳಸುವುದಿಲ್ಲ; ಇಷ್ಟು ಶೌರ್ಯ ಧೈರ್ಯಗಳಿಂದ ಸಂಪಾದಿಸಿದ ನೀರು ದೇವರಿಗಲ್ಲದೆ ಇನ್ನಾವ ಕೆಲಸದಲ್ಲಿಯೂ ಉಪಯೋಗಿಸಲ್ಪಡಲರ್ಹವಲ್ಲ, ಎಂದು ಹೇಳಿದನು.

ಕೊನೆಗೆ ಡೇವ್ಹಿಡನು ಯಹೂದಿಗಳ ಅರಸನಾದನು. ಈತನ ಮಗನೇ ಯಹೂದಿಗಳ 'ಶಹಾಜಹಾನ' ನೆನಿಸಿದ (ಜೇರೂಸಲೇಮದ ಪ್ರಸಿದ್ಧವಾದ

ಪ್ರಾರ್ಥನಾಲಯವನ್ನು ಕಟ್ಟಿಸಿದ) ಸಾಲೋಮನ್‌ರಾಜನು. ಯೇಸು ಕ್ರಿಸ್ತನು ಈ ಡೆವ್ಹಿಡನ ವಂಶಜನು.

ನಿಷ್ಕಾಮ ಭಕ್ತಿ.

## ೭೨. ಅರ್ಜುನನ ಪರೀಕ್ಷೆ.

ಒಂದಾನೊಂದು ಸಮಯದಲ್ಲಿ ಭಕ್ತವೀರನಾದ ಅರ್ಜುನನ ಮನಸ್ಸಿನಲ್ಲಿ ನನ್ನಂತಹ ಶ್ರೀಕೃಷ್ಣಭಕ್ತನು ಯಾರೂ ಇಲ್ಲ ಎಂದು ಗರ್ವವುಂಟಾಯಿತು. ಮನಸ್ಸಿನಲ್ಲಿದ್ದ ವಿಚಾರವು ಬಾಯಲ್ಲಿಯೂ ಬರುವುದುಂಟು; ಅರ್ಜುನನು ಈ ಮಾತನ್ನು ಶ್ರೀಕೃಷ್ಣನಿದಿರಿಗೆ ಒಮ್ಮೆ ಆಡಿದನು. ಅಹುದು, ನೀನೊಬ್ಬನು ಭಕ್ತನೇ ಸರಿ ಎಂದು ಕೃಷ್ಣನು ಉತ್ತರಹೇಳಿದನು. 'ನೀನೊಬ್ಬನು ಭಕ್ತನು' ಎಂಬ ಮಾತು ಅರ್ಜುನನ ಮನಸ್ಸಿಗೆ ಬರಲಿಲ್ಲ. ಆಗ ಆತನು ತನಗಿಂತ ಶ್ರೇಷ್ಠಭಕ್ತರಿದ್ದರೆ ಅವರ ಹೆಸರನ್ನು ಹೇಳೆಂದು ಬಲಪಡಿಸಲು, ಎಲ್ಲಿಯಾದರೂ ಯಾವುದೊಂದು ಕೆಲಸಕ್ಕೆ ಹೋದಾಗ ಬೇಕಾದಾಗ ನೀನು ಅಂತಹ ಭಕ್ತನನ್ನು ಕಾಣುವೆ ಎಂದು ಕೃಷ್ಣನು ಹೇಳಿದನು. ಈ ಮಾತಿನಿಂದ ಅರ್ಜುನನು ಇನ್ನಿಷ್ಟು ಅಸಮಾಧಾನಪಟ್ಟನು. ತನ್ನಂತಹ ಭಕ್ತರು ಇಷ್ಟು ಅಗ್ಗವಾಗಿರುವರೇ ಎಂದು ಆಶ್ಚರ್ಯಪಟ್ಟನು. ಅರ್ಜುನನು ಒಮ್ಮೆ ಬೇಟೆಗಾಗಿ ಅಡವಿಗೆ ಹೋಗಿದ್ದನು. ಬೇಟೆಯಾಡಿ ಬಳಲಿ ಅಲ್ಲೊಂದು ಆಶ್ರಮವನ್ನು ಕಂಡು ಅಲ್ಲಿಗೆ ಹೋದನು. ಅಲ್ಲಿ ಒಬ್ಬ ಬ್ರಾಹ್ಮಣನು ಯೋಗಾಸನದಲ್ಲಿ ಕುಳಿತಿರುವನು. ಮುಖಮಂಡಲವು ಅತಿ ಸೌಮ್ಯವಾಗಿರುವುದು. ಕಣ್ಣಲ್ಲಿ ಆನಂದಾಶ್ರುಗಳು ಸುರಿಯುವುವು. ಈ ಶಾಂತಮೂರ್ತಿಯನ್ನು ಕಂಡು ಅರ್ಜುನನ ಬಳಲಿಕೆ ಹರಿದುಹೋಯಿತು. ಕೆಲಹೊತ್ತಾದ ಬಳಿಕ ಯೋಗಿಯು ಕಣ್ದೆರೆದು ಅತಿಥಿಯನ್ನು ಕಂಡು ಆತನ ಕುಲಗೋತ್ರಗಳನ್ನು ಕೇಳದೆ ಯೋಗ್ಯವಾಗಿ ಸತ್ಕರಿಸಿದನು. ಬಳಿಕ ಅರ್ಜುನನು ಯೋಗಿಯನ್ನು ಕುರಿತು ತಮ್ಮ ಬಳಿಯಲ್ಲಿ ಒಂದು ಬಿಲ್ಲೂ ಎರಡು ಬಾಣಗಳೂ ಕಾಣಿಸುತ್ತಿವೆ, ತಮ್ಮ ಬಳಿಯಲ್ಲಿ ಇವು ಏತಕ್ಕೆ? ತಾವು ಬಾಣಗಳನ್ನು ಪ್ರಯೋಗಿಸುತ್ತಿರುವಿರೋ ಎಂದು ಕೇಳಿದನು. ಯೋಗಿಯು ಇಲ್ಲ, ನಾನು ಈ ಎರಡು ಬಾಣಗಳನ್ನು ಇಬ್ಬರು ದಾಂಭಿಕರ ಮೇಲೆ ಬಿಡುವುದಕ್ಕಾಗಿ ಕಾದಿಟ್ಟಿರುವೆನು. ಆ ಇಬ್ಬರು, ಧಾರ್ಮಿಕರೆಂದು ಬಹು ಪ್ರಸಿದ್ಧರು, ಆದರೆ ಅವರು ಯೋಗ್ಯರಲ್ಲ; ಸಾಮಾನ್ಯಜನರು ಅಜ್ಞರೇ ಇರುವರು; ಅವರ ತಪ್ಪು

ದೊಡ್ಡದಲ್ಲ, ತಿಳಿದೂ ತಪ್ಪು ಮಾಡುವವರಿಗೆ ಪ್ರಾಯಶ್ಚಿತ್ತವು ಅವಶ್ಯವಾ
ಗಿರುವುದು ಎಂದು ಹೇಳಿದನು. ಸೌಮ್ಯನಾದ ತಾಪಸನು ಆಗ ಅಗ್ನಿಯಂತೆ
ಉಗ್ರನಾಗಿ ತೋರುತ್ತಿದ್ದನು. ಅರ್ಜುನನು ಬೆರಗಾಗಿ ಆ ಇಬ್ಬರ ಹೆಸರನ್ನು
ಕೇಳಿದನು. ತಪಸ್ವಿಯು—ಅವರಲ್ಲೊಬ್ಬನು. ಪ್ರಹ್ಲಾದನು. ಆತನು ದೇವ
ರಿಗೆ ಪರಮಭಕ್ತನಂತೆ! ಅತ್ಯಂತ ಪ್ರಿಯನಂತೆ! ದೇವರಿಗೆ ಯಾರು ಪ್ರಿಯ
ರಲ್ಲ? ಇನ್ನು ಆತನು ಭಕ್ತನೆಂದು ಹೇಳುವುದು ಏತರ ಮೇಲಿಂದ? ಆತನು
ಚಿಕ್ಕತನದಲ್ಲಿಯೇ ಪರಮೇಶ್ವರನನ್ನು ತಿಳಿದನೆಂದಲ್ಲವೆ? ಎಂದ ಬಳಿಕ ಆತನು
ಅಜ್ಞನಲ್ಲ, ಹೀಗಿದ್ದು ತಂದೆಯು ಆತನನ್ನು ಕೊಲ್ಲಲು ಪ್ರಯತ್ನಿಸಿದಾಗ
ಸುಮ್ಮನೆ ಕೊಲ್ಲಗೊಟ್ಟಿದ್ದರೆ ತೀರುತ್ತಿರಲಿಲ್ಲವೇ? ಧ್ಯಾನದಲ್ಲಿ ಪರಮೇಶ್ವರನ
ದರ್ಶನದಿಂದ ಆನಂದಮಯನಾಗಿರುವವನಿಗೆ ಶರೀರಮೋಹವೇಕೆ? ತಿಳಿಗೇಡಿ
ಗಳಂತೆ ಬದುಕುವ ಪ್ರಯತ್ನವನ್ನೇಕೆ ಮಾಡಿದನು? ದೇವರು ಒಂದು ವಿಶೇಷ
ಪ್ರಕಾರದ ಆಕೃತಿಯನ್ನು ಧರಿಸುವಂತೆ ಮಾಡಿದನು; ಕಂಬದಿಂದ ಹೊರಬೀ
ಳುವಂತೆ ಮಾಡಿದನು. ದೇವರಿಗೆ ಎಷ್ಟು ಶ್ರಮವನ್ನು ಕೊಟ್ಟನು! ಇದಕ್ಕೇ
ನಾದರೂ ಆತನಿಗೆ ನಾಚಿಕೆ ಬಂದಿತೆ? ಸ್ತೋತ್ರ ಮಾಡುವಾಗ ಇದರ
ಉಲ್ಲೇಖವಾದರೂ ಉಂಟೇ? ತಿರುಗಿ ಆತನು ಶ್ರೇಷ್ಠಭಕ್ತನಂತೆ! ಅವನು
ನನ್ನ ಕಣ್ಣಿಗೆ ಬಿದ್ದರೆ ಒಂದು ಬಾಣವನ್ನು ಅವನ ಮೇಲೆ ಬಿಡುವೆನು ಎಂದು
ಹೇಳಿದನು. ಈ ಅಶ್ರುತಪೂರ್ವವಾದ ಭಕ್ತಿಯ ವ್ಯಾಖ್ಯೆಯನ್ನು ಕೇಳಿ
ಅರ್ಜುನನು ಚಕಿತನಾಗಿ ಇನ್ನೊಬ್ಬನು ಯಾರು ಎಂದು ಕೇಳಿದನು. ತಪ
ಸ್ವಿಯು—ಅರ್ಜುನನೆಂಬ ಒಬ್ಬ ಕ್ಷತ್ರಿಯನಿರುವನಂತೆ; ಆ ಪಾಷಂಡನು ದೇವ
ರಿಂದ ರಥ ಹೊಡೆಯುವ ಕೆಲಸವನ್ನು ಮಾಡಿಸಿಕೊಂಡನು. ಆತನ ಜನ್ಮಕ್ಕೆ
ಧಿಕ್ಕಾರವಿರಲಿ! ಇಲ್ಲದಿದ್ದರೆ ಭಾರತಯುದ್ಧದಲ್ಲಿ ಸೋಲುತ್ತಿದ್ದನಂತೆ. ಸೋತಿ
ದ್ದರೆ ಏನು ಕೆಡುತ್ತಿತ್ತು? ಕರ್ತವ್ಯವಾದ ಯುದ್ಧದಲ್ಲಿ ತೊಡಗಿದ್ದರೂ ಆರಂಭ
ದಲ್ಲಿ ಬಂಧುಗಳ ಮತ್ತು ಗುರುಗಳ ಮೇಲೆ ಕೈಯೆತ್ತಬೇಕಾಗುವುದೆಂದು
ಬಹಳ ಭಯವನ್ನು ನಟಿಸಿದನು. ಆದರೆ ದೇವರನ್ನು ಸಾರಥಿಯಾಗಿ ಮಾಡಿ
ಕೊಳ್ಳುವುದಕ್ಕೆ ಆತನಿಗೆ ನಾಚಿಕೆ ಬರಲಿಲ್ಲ. ಹೀಗಿದ್ದು ಆತನು ಭಕ್ತನೆಂದು
ಲೋಕದಲ್ಲಿ ಪ್ರಸಿದ್ಧಿ! ಎಂದು ಹೇಳಿದನು.

ತಪಸ್ವಿಯ ಮಾತುಗಳನ್ನು ಕೇಳಿ, ಆತನ ಭಕ್ತಿಯನ್ನು ಕಂಡು ಅರ್ಜು

ನನು ನಾಚಿದನು. ಅವನ ಮನಸ್ಸಿನ ಹೊಲಸೆಲ್ಲ ತೊಳೆದು ಹೋಯಿತು. ಅಲ್ಲಿಂದ ತೀವ್ರ ಹೊರಟು ಬಂದು ಶ್ರೀಕೃಷ್ಣನನ್ನು ಕಂಡು ಆತನಿಗೆರಗಿ ಕಣ್ಣೀರುಗಳನ್ನು ಸುರಿಸುತ್ತ ನಿಂತನು.

ಆತ್ಮಾರ್ಪಣ.

## ೭೩. ವಿಂಕೇಲ್‌ರೀಡ್.

ಸ್ವಿತ್ಸರ್ಲಂಡದ ಪ್ರಜಾಸತ್ತಾತ್ಮಕ ರಾಜ್ಯವು ಫ್ರಾನ್ಸ್, ಜರ್ಮನಿ, ಆಸ್ಟ್ರಿಯಾ ಇಟಲಿ ಈ ನಾಲ್ಕು ಪ್ರಬಲ ರಾಷ್ಟ್ರಗಳ ಮಧ್ಯದಲ್ಲಿ ಈಗ ೫೦೦ ವರ್ಷಗಳಿಂದ ತನ್ನ ಸ್ವಾತಂತ್ರ್ಯವನ್ನು ಕಾದುಕೊಂಡಿರುವುದು. ಇದು ಸಣ್ಣ ರಾಜ್ಯವು; ಇದರ ಬೇರೆ ಬೇರೆ ಭಾಗಗಳಲ್ಲಿ ಉಡಿಗೆತೊಡಿಗೆ, ನಡೆನುಡಿಗಳು ಭಿನ್ನ ಭಿನ್ನವಾಗಿರುವುವು. ಆದರೂ ಸ್ವಿಸ್ ಜನರು ಅಂತರಂಗದಲ್ಲಿ ಒಂದಾಗಿರುವರು.

ಸ್ವಿಸ್‌ಜನರು ತಮ್ಮ ಸ್ವಾತಂತ್ರ್ಯದ ಸಲುವಾಗಿ ಆಸ್ಟ್ರಿಯದ ಡ್ಯೂಕನೊಡನೆ ಸೇಮ್‌ಪ್ಯಾಕ್ ಎಂಬಲ್ಲಿ ಕೆಲವು ವರ್ಷಗಳ ಹಿಂದೆ ಯುದ್ಧಮಾಡಿದರು. ಕವಚಧಾರಿಗಳೂ, ಶಸ್ತ್ರಾಸ್ತ್ರಪಾಣಿಗಳೂ ಆದ ಆಸ್ಟ್ರಿಯನರ ಪ್ರಬಲ ಸೈನ್ಯವು ಸಾಲು ಮುರಿಯದಂತೆ ನಿಂತು ಯುದ್ಧಮಾಡುತ್ತಿದ್ದಿತು. ಸಾಲು ಮುರಿದರೆ ಮೈಮೇಲೆ ಬೀಳಬೇಕೆಂದು ಸ್ವಿಸ್ ದಂಡಾಳುಗಳು ಕಾಯುತ್ತಿದ್ದರು. ಕೊನೆಗೆ ಸ್ವಿಸ್‌ಜನರು ನಿರಾಶರಾಗಿರಲು, ವಿಂಕೇಲ್‌ರೀಡ್ ಎಂಬ ಒಬ್ಬ ಸ್ವಿಸ್ ಸೈನಿಕನು ಬಾಣವೇಗದಿಂದೋಡಿ ಆಸ್ಟ್ರಿಯದ ಸಾಲಿನ ಮೇಲೆ ಎರಗಿದನು. ಮತ್ತು ಒಬ್ಬೊಬ್ಬರ ಕೈಯೊಳಗಿನ ಶಸ್ತ್ರಗಳನ್ನು ಕಿತ್ತುಕೊಂಡು ನಡುವಿನ ಒಬ್ಬನ ಕೈಯ ಭಾಲೆಯನ್ನು ತನ್ನ ಎದೆಗೆ ಇರಿದುಕೊಂಡು ಬಿದ್ದುಬಿಟ್ಟನು. ಈ ಗೊಂದಲದಲ್ಲಿ ಮೂವರು ಆಸ್ಟ್ರಿಯನ್ ಸೈನಿಕರು ಕ್ಷಣಹೊತ್ತು ತಮ್ಮ ಸ್ಥಳವನ್ನು ಬಿಟ್ಟು ಕದಲಲು, ಆ ಸಾಲು ಮುರಿದು ಸ್ವಲ್ಪ ಮಾರ್ಗವಾಯಿತು. ಇದೇ ದಾರಿಯಿಂದ ಸ್ವಿಸ್‌ಜನರು ಕೊಡಲಿಗಳನ್ನು ಕೈಯಲ್ಲಿ ಹಿಡಿದು ಕೊಂಡು ಆಸ್ಟ್ರಿಯದ ಸೈನ್ಯವನ್ನು ಒಮ್ಮೆಲೆ ಪ್ರವೇಶಿಸಿದರು. ವಿಂಕೆಲ್‌ರೀಡನ ಈ ದೇಶಭಕ್ತಿಯನ್ನು ಕಂಡು ಉತ್ತೇಜನ ಹೊಂದಿದವರಾಗಿ ಸ್ವಿಸ್‌ಜನರು ಬಹು ಪರಾಕ್ರಮದಿಂದ ಹೋರಾಡಲು, ಆಸ್ಟ್ರಿಯನ್ನರು ಪೂರ್ಣವಾಗಿ ಸೋತರು.

ಮಾದರಿಯ ಪುರೋಹಿತ.

## ೭೪. ಮೇವಾಡದಲ್ಲಿ.

ಹನ್ಯಕನ್ಯಗಳಲ್ಲಿ ಯಜಮಾನರ ಮನೆಗೆ ಹೋಗಿ 'ಬಾಬು' ಗಳನ್ನು ಕಟ್ಟಿಕೊಂಡು ಬಂದರೆ, ಪುರೋಹಿತನ ಕರ್ತವ್ಯವು ಮುಗಿಯಲಿಲ್ಲ. ಸರ್ವವಿಧ ದಿಂದ ಯಜಮಾನರ ಐಹಿಕ, ಪಾರಲೌಕಿಕ ಉನ್ನತಿಯೂ ಆಗುವಂತೆ ಕಾಲ ಕಾಲಕ್ಕೆ ತಕ್ಕ ಉಪದೇಶ ಮಾಡುತ್ತ ಅವರ ಕಲ್ಯಾಣವನ್ನು ಚಿಂತಿಸುವುದು ಪುರೋಹಿತನ ಕರ್ತವ್ಯವಾಗಿರುವುದು.

ಮಹಾರಾಣಾ ಪ್ರತಾಪಸಿಂಹನು ತರುಣನಾಗಿದ್ದ ಕಾಲದಲ್ಲಿ ಒಂದಾ ನೊಂದು ದಿವಸ ಬೇಟೆಯ ವಿಷಯವಾಗಿ ಅವನಿಗೂ ಅವನ ಸಹೋದರನಾದ ಶಕ್ತಸಿಂಹನಿಗೂ ವಾದವಿವಾದಗಳು ನಡೆಯಲು, ಕೊನೆಗೆ ಒಬ್ಬರನ್ನೊಬ್ಬರು ಕೊಲ್ಲುವ ಉದ್ದೇಶ್ಯದಿಂದ ಶಸ್ತ್ರವನ್ನೆತ್ತಿದರು. ಅವರ ಕುಲಪುರೋಹಿತನು ಈ ರಾಕ್ಷಸವ್ಯಾಪಾರವನ್ನು ಬಿಡಿಸುವುದಕ್ಕಾಗಿ ಅವರಿಬ್ಬರ ನಡುವೆ ನಿಂತು ಬೇಕಾದಷ್ಟು ಉಪದೇಶಿಸಿದನು. ಆದರೆ ಸಿಟ್ಟಿನಿಂದ ಎಚ್ಚರದಪ್ಪಿದ ಆ ಯುವ ಕರು ಪುರೋಹಿತನ ಮಾತನ್ನು ಲಕ್ಷಿಸದಿರಲು, ಆತನು ನಿಟ್ಟುಸಿರುಬಿಟ್ಟು-ಪವಿ ತ್ರವಾದ ರಾಣಾವಂಶಕ್ಕೆ ವಿಘಾತುಕವೂ, ಶತ್ರುಗಳಿಗೆ ಆನಂದವರ್ಧಕವೂ ಆದ ಈ ಗೃಹಕಲಹವನ್ನು ನನ್ನ ಮಾತಿಗೆ ಮಾನಕೊಟ್ಟು ನೀವು ನಿಲ್ಲಿಸದಿರುವಾಗ ನಾನು ಇದಿರಿಗೆ ನಿಂತು ಈ ನೋಟವನ್ನು ನೋಡಲಾರೆನು; ಆದುದರಿಂದ ಈಗ ನನಗೆ ಮರಣದ ಹೊರತು ಉಪಾಯವಿಲ್ಲ; ಈಗಲಾದರೂ ನಿಮ್ಮ ಈ ದುರ್ವ್ಯಾ ಪಾರವು ನಿಲ್ಲಲಿ ಎಂದು ಹೇಳಿ ಕಠಾರಿಯನ್ನು ಎದೆಗೆ ಚುಚ್ಚಿಕೊಂಡು ದಧೀಚಿ ಸಮಾನನಾದ ಆ ಪುರೋಹಿತನು ಅಲ್ಲಿಯೇ ಪ್ರಾಣವನ್ನು ಬಿಟ್ಟನು. ಒಮ್ಮೆಲೆ ಒದಗಿದ ಈ ಪ್ರಸಂಗವನ್ನು ಕಂಡು ಆ ಇಬ್ಬರು ಅರಸುಮಕ್ಕಳ ಮೋಹವು ನಷ್ಟವಾಯಿತು. ಸಿಟ್ಟಿನ ಮನೋವಿಕಾರವು ಇಲ್ಲದಂತಾಯಿತು. ತಾವು ಮಾಡಿದ ಕೃತಿಯ ವಿಷಯವಾಗಿ ಅವರಿಗೆ ನಾಚಿಕೆಯುಂಟಾಯಿತು. ದುಃಖ ದಿಂದ ಮನಸ್ಸು ವ್ಯಾಕುಲವಾಯಿತು. ಕಲಹವು ನಿಂತುಹೋಯಿತು. ಪುರೋ ಹಿತನ ಬಯಕೆಯಂತೆ ರಾಜವಂಶವು ಮೃತ್ಯುಮುಖದಿಂದ ಪಾರಾಯಿತು. ಆ ದಿವಸದ ದ್ವಂದ್ವಕಲಹದಲ್ಲಿ ಸಮಾನಬಲರಾದ ಅವರಿಬ್ಬರ ನಾಶವೂ ಆಗುವ ಸಂಭವವಿದ್ದಿತು. ಮಹಾರಾಣಾ ಪ್ರತಾಪಸಿಂಹನು ಮುಂದೆ ಆ ಸ್ಥಳದಲ್ಲಿ ಮಹಾತ್ಮನಾದ ಆ ಪುರೋಹಿತನ ಜಯಸ್ಮೃತಿಸ್ತಂಭವನ್ನು ನಿರ್ಮಿಸಿರುವನು.

ಒಡೆಯನಲ್ಲಿ ಕೃತಜ್ಞತೆ;

## ೮೫. ಫಡಕೆ ಹರಿಪಂತನು.

ಮೊದಲು ಫಡಕೆ ಹರಿಪಂತನು ವಾಸವಳೆ ಎಂಬ ಸಾವುಕಾರರಲ್ಲಿ ನೌಕರಿ ಮಾಡುತ್ತಿದ್ದನು. ಒಂದಾನೊಂದು ದಿವಸ ಪೇಶವೆಯವರು 'ಮೇಜವಾನಿ' ಗಾಗಿ ಆ ಸಾವುಕಾರರ ಮನೆಗೆ ಬಂದಾಗ ಹರಿಪಂತನ ಕುಶಲತನವನ್ನೂ ಸಮಯಸ್ಫೂರ್ತಿಯನ್ನೂ ಕಂಡು ಆತನನ್ನು ತಮ್ಮ ಬಳಿಯಲ್ಲಿ ನೌಕರಿಗೆ ಇಟ್ಟುಕೊಂಡರು. ಮುಂದೆ ಕೆಲವು ದಿವಸಗಳಲ್ಲಿ ಫಡಕೆ ಹರಿಪಂತನು ಸುಪ್ರಸಿದ್ಧ ಸರದಾರನಾಗಿ ಪೇಶವೆ ರಾಜ್ಯದಲ್ಲಿ ಒಬ್ಬ ಮುಖ್ಯ ಮನುಷ್ಯನಾದನು. ಆದರೂ ಹರಿಪಂತನು ತನ್ನ ಮೊದಲಿನ ಒಡೆಯನಲ್ಲಿ ಕೃತಜ್ಞತೆಯಿಂದ ಇದ್ದನು. ಮುಂದೆ ವಾಸವಳೆ ಸಾವುಕಾರನು ತೀರಿಕೊಂಡ ಮೇಲೆ ಅವನ ಶ್ರಾದ್ಧತಿಥಿಗೆ ಅವರ ಮನೆಗೆ ಊಟಕ್ಕೆ ತಪ್ಪದೆ ಹೋಗುತ್ತಿದ್ದನು. ಹರಿಪಂತನು ತನಗೆ ಆಮಂತ್ರಣ ಹೇಳಲವಶ್ಯವಿಲ್ಲವೆಂದೂ ತಾನಾಗಿ ಆ ದಿವಸ ತಪ್ಪದೆ ಬರುವೆವೆನೆಂದೂ ಆ ಮನೆಯವರಿಗೆ ಹೇಳಿಟ್ಟಿದ್ದನು. ಮತ್ತು ಹರಿಪಂತನು ಆ ವಾಸವಳೆ ಸಾವುಕಾರರ ಮನೆಯಲ್ಲಿ ಮೊದಲು ಇದ್ದಾಗ ಊಟದ ವೇಳೆಯಲ್ಲಿ ಉಪಯೋಗಿಸುವ 'ಥಾಬಳಿ' ಯನ್ನೂ ನೀರಿನ ಥಾಲಿಯನ್ನೂ ಅವರ ಮನೆಯಲ್ಲಿ ಒಂದು ಬಾಗಿಲು ಮಾಡದಲ್ಲಿ ಬೀಗಹಾಕಿ ಇಟ್ಟಿದ್ದನು. ಅವರಲ್ಲಿ ಊಟಕ್ಕೆ ಹೋದಾಗಲೆಲ್ಲ ಅದೇ ಹರಕಥಾಬಳಿಯನ್ನೂ ಒಡಕಥಾಲಿಯನ್ನೂ ಉಪಯೋಗಿಸುತ್ತಿದ್ದನು. ಯಾವಾಗಲೂ ಆ ಮನೆತನದವರ ವಿಷಯದಲ್ಲಿ ವಿನಯದಿಂದ ನಡೆದು ಕಡೆತನಕ ಕೃತಜ್ಞತೆಯನ್ನು ತೋರ್ಪಡಿಸುತ್ತಿದ್ದನು.

---

ವೈರಾಗ್ಯದ ಶಾಂತಿ.

## ೭೬. ಭರ್ತೃಹರಿ.

ವೈರಾಗ್ಯಶೀಲರಾದ ಮಹಾತ್ಮರು 'ಸಮದುಃಖಸುಖಃ ಕ್ಷಮೀ' ಎಂಬಂತೆ ಸುಖದುಃಖಗಳಲ್ಲಿ ಏಕಪ್ರಕಾರವಾಗಿ ಇರುವರು.

ರಾಜ್ಯವನ್ನು ತೊರೆದು ಭಗವದ್ಧ್ಯಾನದಲ್ಲಿ ತೊಡಗಿದ ಮಹಾತ್ಮನಾದ ಭರ್ತೃಹರಿಗೆ ಯಾವನೋ ಒಬ್ಬನು ಬಯ್ಯಲು, ಆತನು ಬಯ್ದವನಿಗೆ— ಅಣ್ಣಾ, ನನಗೆ ಬಯ್ಗುಳ ಪ್ರಯೋಜನವಿಲ್ಲ; ಆದುದರಿಂದ ನೀನು ಕೊಟ್ಟ ಈ ಬಯ್ಗುಳನ್ನು ಸ್ವೀಕರಿಸಲಾರೆನು; ಇನ್ನು ನನ್ನ ಬಳಿಯಲ್ಲಿ ಏನೂ ಇಲ್ಲ; ಬಯ್ಗುಳು ಕೂಡ ನನ್ನ ಬಳಿಯಲ್ಲಿಲ್ಲ. ಆದುದರಿಂದ ನಿನಗೆ ಏನನ್ನೂ ಕೊಡಲಾರೆನು ಎಂದು ಉತ್ತರ ಹೇಳಿದನು.

ದೇವರು ದುಡ್ಡು ಕೊಡುವ ರೀತಿ.

## ೨೨. ರಾಮರಡ್ಡಿಯ ಮಕ್ಕಳು.

ಹೆಬ್ಬಾಳ ಗ್ರಾಮದಲ್ಲಿ ರಾಮರಡ್ಡಿಯೆಂಬ ಒಬ್ಬ ಸ್ಥಿತಿವಂತನಾದ ಒಕ್ಕಲಿಗನಿದ್ದನು. ಅವನಿಗೆ ನಾಲ್ವರು ಮಕ್ಕಳು. ಬಾಲ್ಯದಲ್ಲಿ ಅವರಿಗೆ ಸ್ವಲ್ಪಮಟ್ಟಿಗೆ ಅಕ್ಷರಾಭ್ಯಾಸವಾಗಿದ್ದಿತು. ಆದರೆ ಹೊಸ 'ಫ್ಯಾಶನ್ನಿ' ನ ಮರುಳು ಮಾತ್ರ ಅವರನ್ನು ಬಲವಾಗಿ ಹಿಡಿದಿತ್ತು. ಆದುದರಿಂದ ಮನೆಯ ಒಕ್ಕಲುತನದ ಹೋರೆ ಅವರಿಗೆ ಕೀಳಾಗಿ ತೋರಿತು.

ರಾಮರಡ್ಡಿಯು ಮುಪ್ಪಿನಿಂದ ನೆಲಹಿಡಿದನು. ಮುದುಕನ ಪಾರಾಮರಿಕೆಯನ್ನು ಯಾರೂ ನೋಡದಾದರು. ಮಕ್ಕಳ ಮೈಸೊಕ್ಕಿನಿಂದ ಒಕ್ಕಲುತನವು ಚೆನ್ನಾಗಿ ಸಾಗದಂತಾಗಲು, ಒಳದುಡ್ಡು ತೀರಿಹೋಯಿತು. ಮಕ್ಕಳು ನಿರುಪಯುಕ್ತರಾದರೆಂಬ ಚಿಂತೆ; ಮುಪ್ಪಿನಲ್ಲಿ ತನ್ನನ್ನು ಯಾರೂ ನೋಡರೆಂಬ ಚಿಂತೆ; ಮುದುಕನು ಈ ವ್ಯಥೆಯಿಂದ ತನ್ನ ಒಬ್ಬ ಆಪ್ತಸ್ನೇಹಿತನನ್ನು ಕರೆಯಿಸಿ ಆತನೊಡನೆ ಏಕಾಂತದಲ್ಲಿ ಬಹಳ ಹೊತ್ತು ಆಲೋಚನೆ ಮಾಡಿದನು. ಆ ಆಲೋಚನೆಯ ಮೇರೆಗೆ ಆ ಸ್ನೇಹಿತನು ಎದ್ದು ಹೋಗುವಾಗ ಮನೆಯುವರಿಗೆಲ್ಲ ಕೇಳಿಸುವ ಹಾಗೆ—'ಉಪಾಯವಿಲ್ಲ; ಈ ಕಡೆಗಾಲದಲ್ಲಿ ನಿನ್ನ ಸೇವೆ ಮಾಡಿದ ಮಗನಿಗೆ ನೀನು ದುಡ್ಡು ಹೂತಿಟ್ಟ ಸ್ಥಳವನ್ನು ಹೇಳು' ಎಂದು ನುಡಿಯುತ್ತ ಹೊರಟು ಹೋದನು.

ಮಕ್ಕಳು ಆ ಮಾತನ್ನು ಕೇಳಿ ತಂದೆ ಹಣ ಹೂತಿಟ್ಟ ಸ್ಥಳವನ್ನು ತನಗೆ ಹೇಳಬೇಕೆಂದು ಎಲ್ಲರೂ ತಂದೆಯ ಸೇವೆಯನ್ನು ಮಾಡತೊಡಗಿದರು. ಮುದುಕನಿಗೆ ಸ್ವಲ್ಪ ಸಮಾಧಾನವಾಯಿತು.

ಮುಂದೆ ರಾಮರಡ್ಡಿಯು ಮರಣಕಾಲದಲ್ಲಿ ಮಕ್ಕಳನ್ನು ಹತ್ತಿರ ಕರೆದು ನನ್ನ ಹಣವನ್ನೆಲ್ಲ ಊರ ಮುಂದಿನ ಹೊಲದಲ್ಲಿ ಮೊಳಕಾಲ ಕೆಳಗೆ ಹುಗಿದಿಟ್ಟಿದ್ದೇನೆ ಎಂದು ಹೇಳಿ ಪ್ರಾಣಬಿಟ್ಟನು. ಆ ದೊಡ್ಡ ಹೊಲದಲ್ಲಿ ಯಾವ ಕಡೆಗೆ ಹೂತಿಟ್ಟಿರುವನೆಂಬುದು ಯಾರಿಗೂ ತಿಳಿಯಲಿಲ್ಲವಾದುದರಿಂದ ಆ ಮಗನೊಂದು ಕಡೆ, ಈ ಮಗನೊಂದು ಕಡೆ ಹೀಗೆ ಎಲ್ಲರೂ ಕೂಡಿ ಇಡಿ ಹೊಲವನ್ನು ಸ್ವಲ್ಪ ದಿವಸಗಳಲ್ಲಿ ಮೊಳಕಾಲಮಟ್ಟ ಅಗೆದುಬಿಟ್ಟರು. ಹಣವು ಮಾತ್ರ ಎಲ್ಲಿಯೂ ಸಿಕ್ಕಲಿಲ್ಲ. ಆದರೆ ನಟ್ಟು ಕರಿಕೆಗಳಿಲ್ಲದೆ ಹೊಲವು ಹಸನಾದುದರಿಂದ ಆ ಸಾರೆ ಏಳೆಂಟು ವರ್ಷಗಳಲ್ಲಿ ಕೂಡಿ ಬರುವಷ್ಟು ಹುಟ್ಟುವಳಿ

ಬಂದಿತು. ಆಗ ಅವರ ತಂದೆಯ ಸ್ನೇಹಿತನು ಅವರನ್ನು ಕುರಿತು—ಮಕ್ಕಳಿರಾ, ಹೊಲವನ್ನು ಅಗೆದಿದ್ದರಿಂದ ಬೆಳೆ ಸಮೃದ್ಧವಾಗಿ ಬಂದಿತು; ಇದು ನೋಡಿರಿ, ಈ ಬಾರಿಯ ಉತ್ಪನ್ನವು ನಿಮ್ಮ ತಂದೆ ಹೂತಿಟ್ಟ ಹಣವೆಂದೇ ತಿಳಿಯಿರಿ. ಇದೇ ಮೇರೆಗೆ ಬೇರೆ ಹೊಲಗಳನ್ನೂ ಅಗೆದರೆ ನೀವು ಹಣವಂತರಾಗುವಿರಿ; ನಿಮ್ಮ ತಂದೆ ನಿಮಗೆ ಈ ಬುದ್ಧಿಯನ್ನು ಕಲಿಸಲೋಸುಗವೇ ಆ ಮೇರೆಗೆ ಹೇಳಿದನು. ಎಂದು ಉಪದೇಶಿಸಿದನು. ಮಕ್ಕಳು ಬುದ್ಧಿಯ ಕಲಿತರು; ತಂದೆ ಹಾಗೆ ಹೇಳಿದುದರ ಗುಟ್ಟನ್ನರಿತುಕೊಂಡರು. ಮುಂದೆ ಪ್ರತಿವರ್ಷ ಎಲ್ಲರೂ ಕೂಡಿ ಒಂದೊಂದು ಹೊಲವನ್ನು ಅಗೆಯುತ್ತ ನಡೆದರು. ಕೆಲವು ವರ್ಷಗಳಲ್ಲಿ ಅವರು ಮೊದಲಿನಂತೆ ಶ್ರೀಮಂತರಾದರು.

ದುಡಿತದಲ್ಲಿ ದೇವರು ದುಡ್ಡನ್ನು ಹೂತಿರುವನು. ದುಡಿತದೊಳಗೆ ಹೊಕ್ಕವನು ಆ ದುಡ್ಡನ್ನು ಕಾಣುವನು. ದುಡಿತದಿಂದ ದೂರದಲ್ಲಿರುವವನಿಗೆ ಆ ಹಣವು ಕಾಣಿಸದು.

---

ಆತ್ಮ ಸಂಯಮನ

## ೭೮. ಹಜರತ ಹುಸೇನ.

ಎಜಿದನ ಗುಪ್ತತಂತ್ರದಿಂದ ಹಜರತ ಹುಸೇನನು ತನ್ನ ಎಲ್ಲ ಪರಿವಾರದೊಡನೆ ಕುಫಾರಾಜ್ಯಕ್ಕೆ ಹೊರಟನು. ಕುಫಾರಾಜ್ಯದ ಒಡೆಯನಾದ ಜಿಯಾದನು ದಾಮಸ್ಕರಾಜ್ಯದ ಒಡೆಯನಾದ ಎಜಿದನು ಕೊಟ್ಟ ಹಣಕ್ಕೆ ಮನಸೋತು ತನ್ನ ಮಿತ್ರನಾದ ಹಜರತ ಹುಸೇನನನ್ನು ಕಪಟದಿಂದ ತನ್ನ ರಾಜ್ಯಕ್ಕೆ ಕರೆಯಿಸಿದ್ದನು. ಹಜರತ ಹುಸೇನನು ದಾರಿಯ ತಪ್ಪಿ ಸ್ವಲ್ಪವೂ ನೀರಿಲ್ಲದ ಕರ್ಬಲಾ ಎಂಬ ಅಪಾರವಾದ ಉಸುಕಿನ ಬಯಲಿಗೆ ಬಂದನು. ಆ ಬಯಲಲ್ಲಿ ಬಹು ದೂರ ಬಂದ ಬಳಿಕ ಹುಸೇನನ ಕಡೆಯವರಿಗೆ ತಾವು ಕರ್ಬಲಾ ಬಯಲಿಗೆ ಬಂದೆವೆಂಬುದು ತಿಳಿಯಿತು. ಅಲ್ಲಿ ಎಲ್ಲಿಯೂ ನೀರೇ ಇಲ್ಲ. ಸಂಗಡ ತಂದ ನೀರೂ ಆಹಾರ ಸಾಮಗ್ರಿಯೂ ತೀರುತ್ತ ಬಂದಿತು. ಹಿಂದಕ್ಕೆ ತಿರುಗಿ ಹೋಗುವಂತೆಯೂ ಇರಲಿಲ್ಲ. ಹಲವರು ನೀರನ್ನು ಹುಡುಕಲೋಸುಗ ನಡೆದರು. ಎಲ್ಲರೂ ನೀರಡಿಕೆಯಿಂದ ಕಳವಳಿಸತೊಡಗಿದರು. ಬಹುದೂರದಲ್ಲಿ ಫುರಾತ್ ಎಂಬ ಹೊಳೆ ಅವರಿಗೆ ಸಿಕ್ಕಿತು. ನೀರಿನ ಪ್ರವಾಹವನ್ನು ನೋಡಿದೊಡನೆ ಅವರ

ದಾಹವು ಮತ್ತಷ್ಟು ಹೆಚ್ಚಿತು. ಆದರೆ ಆ ಹೊಳೆಯ ಸಮೀಪಕ್ಕೆ ಇವರು ಹೋಗುವಂತಿರಲಿಲ್ಲ. ಏಕೆಂದರೆ, ಅದರ ದಡದಲ್ಲಿ ಶತ್ರುಗಳ ಸೇನೆ ಇಳಿದು ಕೊಂಡಿದ್ದಿತು. ನೀರಿಗೆ ಹೋದ ಜನರು ಈ ಸುದ್ದಿಯನ್ನು ಹಜರತ ಹುಸೇನ ನಿಗೆ ಅರುಹಿದರು. ಚಿಕ್ಕಮಕ್ಕಳು ನೀರಿಲ್ಲದೆ ಒದೆದಾಡುತ್ತಿದ್ದವು. ಹತ್ತ ನೆಯ ದಿವಸ ಹಜರತ ಹುಸೇನನ ಹೆಂಡತಿ ಶಹರ್‌ಬಾನುವು ತನ್ನ ಸಣ್ಣ ಕೂಸನ್ನು ಪತಿಯ ಕೈಯಲ್ಲಿ ಕೊಟ್ಟು—ನೀರಿಲ್ಲದುದರಿಂದ ಎದೆಯಲ್ಲಿ ಹಾಲಿಲ್ಲ. ನಾನು ಸತ್ತರೂ ಚಿಂತೆಯಿಲ್ಲ, ನೀರನ್ನು ಸಂಪಾದಿಸಿ ಈ ಕರುಳನ್ನಾ ದರೂ ಬದುಕಿಸಿಕೊಳ್ಳಿರಿ ಎಂದು ಹೇಳಿದಳು. ಆಗ ಹ. ಹುಸೇನನು ಮುಂದು ಗಾಣದೆ ಕೂಸನ್ನೆತ್ತಿಕೊಂಡು ಕುದುರೆಯನ್ನೇರಿ ಫುರಾತ ನದಿಯ ಹತ್ತಿರಕ್ಕೆ ಬಂದು ಕೂಸಿಗೆ ಸ್ವಲ್ಪ ನೀರನ್ನು ಕೊಡಿರೆಂದು ವೈರಿಗಳನ್ನು ಕೇಳಿದನು. ಆದರೆ ಶತ್ರುಗಳಿಂದ ನೀರಿಗೆ ಬದಲಾಗಿ ಬಂದ ಬಾಣವು ಬಂದು ಕೂಸಿಗೆ ತಗುಲಿ, ಅದಕ್ಕೆ ನೀರಿನ ಆಶೆಯೇ ಇಲ್ಲದಂತೆ ಮಾಡಿತು. ಹ. ಹುಸೇನನು ಬಾಣದ ಗಾಯದಿಂದ ರಕ್ತಮಯವಾದ ಕೂಸನ್ನು ತಂದು ಶಹರಬಾನುವಿನ ಕೈಯಲ್ಲಿ ಕೊಟ್ಟನು. ಕೊನೆಗೆ ಹ. ಹುಸೇನನ ಕಡೆಯ ವೀರರೆಲ್ಲರೂ ಯುದ್ಧದಲ್ಲಿ ಮಡಿಯಲು, ಆತನು ದುಲ್‌ದುಲ್ ಎಂಬ ಕುದುರೆಯನ್ನೇರಿ ಆವೇಶದಿಂದ ರಣರಂಗಕ್ಕೆ ನಡೆದನು. ಹುಸೇನನ ವೀರಾವೇಶವನ್ನು ಕಂಡು ವೈರಿಗಳು ಬೆದರಿ ದಿಕ್ಕುಗೆಟ್ಟು ಓಡಿಹೋದರು. ಫುರಾತ್ ನದಿಯ ದಂಡೆಯು ಹುಸೇನನ ಸ್ವಾಧೀನವಾಯಿತು. ನೀರನ್ನು ನೋಡಿದೊಡನೆ ಆತನ ನೀರಡಿಕೆ ಇಮ್ಮಡಿಸಿತು. ಆತನು ಕುದುರೆಯಿಂದಿಳಿದು ಬೊಗಸೆಯಲ್ಲಿ ನೀರನ್ನೆತ್ತಿ ಕುಡಿಯಬೇಕೆಂದಿರುವಾಗ ನೀರಿನ ಸಲುವಾಗಿ ತನ್ನ ಜನರೆಲ್ಲ ಪ್ರಾಣಬಿಟ್ಟಿರು ವುದು ಆತನ ನೆನಪಿಗೆ ಬಂದಿತು. ಆಗ ಅಂತಹ ದುಃಸಹವಾದ ನೀರಡಿಕೆ ಯಿಂದ ಬಳಲಿದ್ದರೂ ಹ. ಹುಸೇನನು ಬೊಗಸೆಯೊಳಗಿನ ನೀರನ್ನು ಹಾಗೆಯೇ ಕೆಳಗೆ ಚೆಲ್ಲಿ ಮೇಲೆ ಬಂದನು. ಮತ್ತೆ ಶತ್ರುಗಳ ಮೇಲೆ ರಭಸದಿಂದ ಹೋಗಿ ಕಾದಿ ಸಮರಾಂಗಣದಲ್ಲಿ ಬಿದ್ದು ಮಡಿದನು.

---

ಕರ್ತವ್ಯನಿಷ್ಠೆ.

## ೭೯. ಬಾಜಿಪ್ರಭು ದೇಶಪಾಂಡೆ.

ಶಿವಾಜಿಮಹಾರಾಜರು ಅಫಜುಲಖಾನನ ಶಾಸನ ಮಾಡಿದ ಬಳಿಕ ವಿಜಾಪುರದ ಬಾದಶಹನು ಸಿದ್ದಿಜೋಹರ ಎಂಬ ಪರಾಕ್ರಮಿ ಸರದಾರನನ್ನು

ಶಿವಾಜಿಯ ಶಾಸನ ಮಾಡುವುದಕ್ಕೆ ಕಳುಹಿದನು. ಅಫಜುಲಖಾನನ ಮಗ ಫಾಜಲಖಾನನು ದುಡಿನೊಡನೆ ಸಿದ್ದಿಜೋಹರನ ಸಂಗಡ ಹೊರಟನು. ಶಿವಾಜಿಮಹಾರಾಜರು 'ಪನ್ಹಾಳಾ' ಕೋಟೆಯಲ್ಲಿದ್ದರು. ಸಿದ್ದಿಜೋಹರನು ಮೂರು ತಿಂಗಳ ವರೆಗೆ ಆ ಕೋಟೆಯನ್ನು ಮುತ್ತಿ ನಿಲ್ಲಲು, ಶಿವಾಜಿಮಹಾರಾಜರು ಒಪ್ಪಂದ ಮಾಡಿಕೊಳ್ಳುವ ವಿಚಾರದಿಂದ ಒಂದು ದಿವಸ ಸಿದ್ದಿಯನ್ನು ಕಂಡು—ನಾಳೆ ಕೋಟೆಯನ್ನು ಒಪ್ಪಿಸುವೆನೆಂದು ಹೇಳಿದರು. ಒಪ್ಪಂದದ ವಿಚಾರವು ನಡೆದುದರಿಂದಲೂ, ಮಳೆಗಾಲದ ಮೂರು ತಿಂಗಳು ಮುತ್ತಿಗೆಯಲ್ಲಿ ಬೇಸತ್ತುದರಿಂದಲೂ ಸೈನಿಕರೂ, ಪಹರೆಯವರೂ ಆ ದಿವಸ ರಾತ್ರಿ ಮೈಮರೆತಿದ್ದರು. ಮಹಾರಾಜರು ನಡುವಿರುಳು ಕತ್ತಲೆಯಲ್ಲಿ ಮಾವಳೆ ಜನರ ಒಂದು ಗುಂಪಿನೊಡನೆ ಕೋಟೆಯಿಂದ ಕೆಳಗಿಳಿದು ಅಗಸೆಬಾಗಿಲುಗಳ ಪಹರೆಯವರನ್ನು ಮೆಲ್ಲನೆ ದಾಟುತ್ತ ಸಾಗಿ ರಾಂಗಣಾ ಕೋಟೆಯ ಕಡೆಗೆ ನಡೆದರು. ಬಹಳ ವೇಳೆಯಾದ ಬಳಿಕ ಶಿವಾಜಿಯು ಕೋಟೆಯಿಂದ ಪಾರಾಗಿ ಹೋದನೆಂಬುದನ್ನು ಅರಿತು ಸಿದ್ದಿಯ ಮಗನಾದ ಅಜೀಬನೂ ಫಾಜಲಖಾನನೂ ಸವಾರಿಗಳಾಗಿ ಬೆನ್ನಟ್ಟಿದರು. ಬೆಳಗಿನ ಒಂಬತ್ತುಗಂಟೆಗೆ ರಾಂಗಣಾ ಕೋಟೆಯ ಮಾರ್ಗವನ್ನು ಏರುತ್ತಿದ್ದ ಶಿವಾಜಿಮಹಾರಾಜರು ತಮ್ಮ ಬೆನ್ನ ಹಿಂದೆಯೇ ವೈರಿಗಳು ಸಾಗಿಬರುತ್ತಾರೆಂಬುದನ್ನು ಕಂಡರು. ಆಗ ಬಾಜಿಪ್ರಭು ದೇಶಪಾಂಡೆ ಎಂಬ ನಂಬುಗೆಯ ಸರದಾರನನ್ನು ಕರೆದು-ನಾವು ಕೋಟೆಯನ್ನು ಸೇರುವವರೆಗೆ ಹಗೆಗಳನ್ನು ಈ ಕಿಂಡಿಯಿಂದೀಚೆಗೆ ಬಿಡಕೂಡದೆಂದೂ, ಕೋಟೆಯನ್ನು ಸೇರಿದೊಡನೆ ಸೂಚನಾರ್ಥವಾಗಿ ತೋಫನ್ನು ಹಾರಿಸುವೆನೆಂದೂ ಹೇಳಿ ಮುಂದೆ ನಡೆದರು. ಬಾಜಿಯು ಮಹಾರಾಜರಿಗೆ—ತಾವು ಮುಂದೆ ಹೋಗಿರಿ, ನಾನು ಶತ್ರುಗಳನ್ನು ಇಲ್ಲಿಂದೀಚೆಗೆ ಬರಗೊಡುವುದಿಲ್ಲ ಎಂದು ಹೇಳಿ ತನ್ನ ಸ್ವಲ್ಪಜನ ಸೈನಿಕರನ್ನು ವ್ಯವಸ್ಥೆಗೊಳಿಸಿ ನಿಲ್ಲಿಸಿಕೊಂಡು ನಿಂತನು. ಅಷ್ಟರಲ್ಲಿ ಶತ್ರುಗಳು ಅಲ್ಲಿಗೆ ಬಂದರು. ಅವರು ಬೇಕಾದಷ್ಟು ಪರಾಕ್ರಮವನ್ನು ತೋರಿಸಿದರೂ ಬಾಜಿಯು ಒಬ್ಬ ಶತ್ರುವನ್ನೂ ಆ ಕಿಂಡಿಯ ಮಾರ್ಗದಿಂದ ಮುಂದೆ ಸಾಗಗೊಡಲಿಲ್ಲ. ಕೆಲವು ವೇಳೆಯಲ್ಲಿ ವಿಜಾಪುರದವರ ಸೇನೆಯ ಕೆಲ ಭಾಗವು ಅಲ್ಲಿಗೆ ಬಂದಿತು. ಆಗ ಆ ದೊಡ್ಡ ಸೈನ್ಯವನ್ನು ತಡೆದು ಹಿಡಿಯುವಲ್ಲಿ ಬಾಜಿಯು ತನ್ನ ಅತ್ಯಂತ ಪರಾಕ್ರಮವನ್ನು ತೋರ್ಪಡಿಸಿ

ದನು. ಇಷ್ಟಾಗುವುದರೊಳಗೆ ಫಾಜಲಖಾನನು ಮತ್ತೆ ಹಿಂದುಳಿದ ಹೊಸ ಸೇನೆಯನ್ನು ಕರೆದುಕೊಂಡು ಬಂದನು. ಮಧ್ಯಾಹ್ನದ ಪ್ರಖರವಾದಬಿಸಿಲು; ಬಾಜಿಯ ಸೇನೆ ಮೊದಲೇ ಸಣ್ಣದು. ಅನೇಕರು ರಣಭೂಮಿಯಲ್ಲಿ ಬಿದ್ದಿದ್ದರು. ಶತ್ರುಗಳ ಸೇನೆ ಹೊಸ ಹೊಸದಾಗಿ ಬಂದುದರಿಂದ ಅದು ದಣಿದಿರಲಿಲ್ಲ. ಬಾಜಿಯೂ ಅವನ ದಂಡಾಳುಗಳೂ ಅತಿಶಯವಾಗಿ ದಣಿದಿದ್ದರು. ಆದರೂ ಆತನು ಶೌರ್ಯದಿಂದ ಕಾದುತ್ತಲೇ ಇದ್ದನು. ಅವನು ರಾಂಗಣಾ ಕೋಟೆಯ ಕಡೆಯಿಂದ ಬರಬಹುದಾದ ತೋಫಿನ ಸಪ್ಪಳವನ್ನೇ ಆಲಿಸುತ್ತಿದ್ದನು. ಆ ದೊಡ್ಡ ಹೊಸ ಸೇನೆಯ ಇದಿರಿಗೆ ಬಹು ಸ್ವಲ್ಪ ಜನರೊಡನೆ ಬಾಜಿಯು ನಿಲ್ಲುವುದು ಅಸಾಧ್ಯವಾಯಿತು. ಆತನಿಗೆ ಶತ್ರುಗಳ ಒಂದು ಗುಂಡು ಬಡಿಯಿತು. ಬಾಜಿಯು ಈ ವರೆಗೆ ಯಾವ ತೋಫಿನ ಸಪ್ಪಳವನ್ನು ಲಕ್ಷ್ಯಕೊಟ್ಟು ಆಲಿಸುತ್ತಿದ್ದನೋ ಆ ತೋಫಿನ ಸಪ್ಪಳವೂ ಆಯಿತು. ಗುಂಡು ತಾಕಿ ಬಳಲಿದ ಬಾಜಿಯ ಮುಖದ ಮೇಲೆ ಆನಂದ ಮುದ್ರೆ ತೋರಿತು. ಮರಣೋನ್ಮುಖನಾದ ಬಾಜಿಯ ಬಾಯಿಂದ ಆಗ 'ನಾನು ನನ್ನ ಕರ್ತವ್ಯವನ್ನು ಮಾಡಿದೆನು' ಎಂಬ ಮಾತು ಹೊರಟಿತು. ಸಮಾಧಾನದ ಮುಖಮುದ್ರೆಯುಳ್ಳ ಬಾಜಿಪ್ರಭು ದೇಶಪಾಂಡೆಯ ನಶ್ವರ ಶರೀರವು ರಣಾಂಗಣದಲ್ಲಿ ಬಿದ್ದಿತು.

ಮರಣಕಾಲದಲ್ಲಿ— 'ನನ್ನ ಕರ್ತವ್ಯವನ್ನು ನಾನು ಮಾಡಿದೆನು' ಎಂದು ಹೇಳುವ ಯೋಗವು ಕೆಲವು ಜನರಿಗೆ ಮಾತ್ರ ಬರುವುದು.

---

ಸಭ್ಯತನ.

## ೪೦. ಜರ್ಮನಿಯ ಒಕ್ಕಲಿಗನು.

ಜರ್ಮನಿಯಲ್ಲಿ ಯುದ್ಧವು ನಡೆದಾಗ ಒಮ್ಮೆ ಒಬ್ಬ ಕ್ಯಾಪ್ಟನನು ಕೆಲವು ಜನ ಸವಾರರನ್ನು ಸಂಗಡ ಕರೆದುಕೊಂಡು ಕುದುರೆಗಳ ಮೇವಿಗಾಗಿ ಹೊರಗೆ ಹೊರಟಿದ್ದನು. ಸುತ್ತಲು ಬಣಬಯಲು. ಮೇವು ಎಲ್ಲಿಯೂ ಕಾಣಿಸಲಿಲ್ಲ. ಆಗ ಕ್ಯಾಪ್ಟನನು ಒಬ್ಬ ಒಕ್ಕಲಿಗನನ್ನು ಹಿಡಿದು ಮೇವು ಬೆಳೆದ ಹೊಲವನ್ನು ತೋರಿಸೆಂದು ಕೇಳಿದನು. ಒಕ್ಕಲಿಗನು ನಿರ್ವಾಹವಿಲ್ಲದೆ ದಾರಿಯ ತೋರಿಸಲಿಕ್ಕೆ ಹೊರಟನು. ಸ್ವಲ್ಪ ದೂರದಲ್ಲಿ ಹಚ್ಚಗೆ ಕಂಗೊಳಿಸುವ ಒಂದು ಮೇವಿನ ಹೊಲವು ಕಾಣಿಸಿತು. ಕ್ಯಾಪ್ಟನನು ಆ ಹೊಲದಲ್ಲಿ ಮೇವನ್ನು ಕೊಯ್ದುಕೊಳ್ಳುವೆನೆಂದು ಕೇಳಿದನು. ಆದರೆ ಒಕ್ಕಲಿಗನು ಇನ್ನು ಸ್ವಲ್ಪ ದೂರ ನಡೆಯಿರಿ ಎಂದು ಹೇಳಿ ಮುಂದೆ ಕರೆದೊಯ್ದನು. ಬಹಳ ದೂರ

ಹೋದಬಳಿಕ ಒಕ್ಕಲಿಗನು ಒಂದು ಹೊಲವನ್ನು ತೋರಿಸಿದನು. ಮೊದಲಿನ
ಹೊಲಕ್ಕಿಂತ ಅಲ್ಲಿ ಹೆಚ್ಚಿಗೆ ಬೆಳೆ ಇರಲಿಲ್ಲ. ಹೊಲದ ಬೆಳೆಯನ್ನೆಲ್ಲ ಕೊಯ್ದು
ಕೊಂಡು ಸವಾರರು ಕುದುರೆಗಳ ಮೇಲೆ ಹೊರೆಗಳನ್ನಿಟ್ಟುಕೊಂಡು ನಡೆದರು.
ಆದರೆ ನಿಷ್ಕಾರಣವಾಗಿ ಇಷ್ಟು ದೂರ ಕರೆತಂದುದಕ್ಕೆ ಕಪ್ತಾನನು ಸಿಟ್ಟಾಗಿ—
ಮೊದಲಿನ ಹೊಲದ ಬೆಳೆಯೂ ಚೆನ್ನಾಗಿತ್ತು; ನನ್ನನ್ನು ಇಷ್ಟು ದೂರ
ಸುಮ್ಮನೆ ಏಕೆ ಕರೆತಂದೆ ಎಂದು ರೇಗಿದನು. ಒಕ್ಕಲಿಗನು—ಈ ಹೊಲವು
ನನ್ನದು; ಬೆಲೆ ಕೊಡದೆ ಹಾಗೆಯೇ ತಾವು ಒಯ್ಯುವಾಗ ಎರಡನೆಯವರ
ಹೊಲವನ್ನು ತೋರಿಸುವುದು ಉಚಿತವಲ್ಲವೆಂದು ನನ್ನ ಹೊಲದ ವರೆಗೆ
ತಮ್ಮನ್ನು ಕರೆತಂದೆನು, ಕ್ಷಮಿಸಬೇಕು; ಎಂದು ಹೇಳಿದನು.

---

ವಿಧೇಯತೆ.

## ೪೧. ಕಾಸಾಬಿಯಾಂಕಾ.

ನೆಪೋಲಿಯನ್ ಬೋನಾಪಾರ್ಟನು ಫ್ರಾನ್ಸದ ಅಧಿಪತಿಯಾದ ಬಳಿಕ
ಇಟಲಿಯನ್ನು ಜಯಿಸಿದ ೩೦ ಸಾವಿರ ಉತ್ಕೃಷ್ಟ ಸೇನೆಯೊಡನೆ ಇಜಿಪ್ತಕ್ಕೆ
ಬಂದನು. ಆತನು ಇಜಿಪ್ತದಿಂದ ಮುಂದೆ ಸಿರಿಯಾ, ಮೆಸೊಪೊಟೇಮಿಯಾ,
ಇರಾಣ, ಕಂದಹಾರ ಮೊದಲಾದವುಗಳನ್ನು ಆಕ್ರಮಿಸುತ್ತ ಆಕ್ರಮಿಸುತ್ತ
ಎರಡನೆಯ ಅಲೆಕ್‌ಜಾಂಡರನಂತೆ ಭರತಖಂಡವನ್ನು ಪ್ರವೇಶಿಸಬೇಕೆಂದೂ,
ಅಲ್ಲಿ ಇಂಗ್ಲಿಷರನ್ನು ಹೊರದೂಡಿ ಫ್ರಾನ್ಸದ ಅಧೀನದಲ್ಲಿ ದೊಡ್ಡ ಸಾಮ್ರಾ
ಜ್ಯವನ್ನು ನೆಲೆಗೊಳಿಸಬೇಕೆಂದೂ ಆಲೋಚಿಸಿದ್ದನು. ಇಜಿಪ್ತದಿಂದ ಆತನು
ನಿನ್ನ ಸಹಾಯಕ್ಕೆ ಬರುತ್ತೇನೆಂದು ಟೀಪುಸುಲ್ತಾನನಿಗೆ ಹೇಳಿಕಳುಹಿದ್ದನು.
ಅದರಿಂದ ಟೀಪುವು ಉತ್ತೇಜನ ಹೊಂದಿ ಇಂಗ್ಲಿಷರೊಡನೆ ಕಲಹವನ್ನಾ
ರಂಭಿಸಿ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಈ ಸಮಯದಲ್ಲಿಯೇ ಇಂಗ್ಲಿಷರ
ಹಡಗುಪಡೆಯ ಸೇನಾಪತಿಯಾದ ನೆಲ್ಸನ್ನನು ಅಬೂಕಿಯ ಉಪಸಾಗರದಲ್ಲಿ
ಫ್ರೆಂಚರ ಹಡಗುಪಡೆಯನ್ನು ಸಂಪೂರ್ಣವಾಗಿ ನಾಶಮಾಡಿದನು.
ಅದರೊಡನೆ ಪೂರ್ವಖಂಡದಲ್ಲಿ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ
ನೆಪೋಲಿಯನನ ಅಭಿಲಾಷೆಯೂ ನಾಶಹೊಂದಿತು. ಈ ಯುದ್ಧಕ್ಕೆ ನೈಲ
ನದಿಯ ಯುದ್ಧವೆಂದೆನ್ನುವರು. ಈ ಯುದ್ಧದಲ್ಲಿ ಫ್ರೆಂಚರ ಓರಿಯಂಟ್
ಎಂಬ ಹಡಗಿನ ಕಪ್ತಾನನಾದ ಕಾಸಾಬಿಯಾಂಕಾ ಎಂಬವನು ತನ್ನ ಹತ್ತು

ವರ್ಷದ ಒಬ್ಬ ಮಗನನ್ನು ಹಡಗಿನಲ್ಲಿ ಒಂದು ಕಡೆಗೆ ನಿಲ್ಲ ಹೇಳಿ ತಾನು ಯುದ್ಧದ ವ್ಯವಸ್ಥೆಯನ್ನು ಮಾಡುತ್ತಿದ್ದನು. ಇಂಗ್ಲಿಷರ ತೋಫಿನ ಹೊಡೆತ ದಿಂದ ಈ ಹಡಗಿಗೆ ಬೆಂಕಿ ಹತ್ತಿತು. ಮತ್ತು ಹಲವು ಜನ ಸೈನಿಕರೂ, ನಾವಿಕರೂ, ಆ ಕಪ್ತಾನನೂ ಸತ್ತುಹೋದರು. ಆಗ ನಾವಿಕರು ಆಪತ್ಕಾಲದ ಡೋಣಿಗಳನ್ನು ಸಮುದ್ರದಲ್ಲಿ ಬಿಟ್ಟು ಈ ಬೆಂಕಿಹತ್ತಿದ ಹಡಗದಿಂದ ಇಳಿದು ಹೋಗತೊಡಗಿದರು. ಆಗ ಬಾಲಕ ಕಾಸಾಬಿಯಾಂಕನಿಗೂ ಹಡಗವನ್ನು ಬಿಟ್ಟು ಡೋಣಿಗೆ ಬರಹೇಳಿದರು. ಆಗ ಆ ಬಾಲಕನು—ತಂದೆಯು ನಾನು ಕರೆಯದೆ ಈ ಸ್ಥಳವನ್ನು ಬಿಟ್ಟು ಬರಬೇಡ; ಇಲ್ಲಿಯೇ ಇರು ಎಂದು ಹೇಳಿ ಹೋಗಿರುವನು. ಆತನು ಕರೆಯದೆ ನಾನು ಇಲ್ಲಿಂದ ಸರಿಯುವುದಿಲ್ಲ ಎಂದು ಹೇಳಿದನು. ಆಗ ನಾವಿಕರು—ತಮ್ಮಾ ನಿನ್ನ, ತಂದೆ ಸತ್ತುಹೋದನು; ಇನ್ನು ಇಲ್ಲಿ ನಿಲ್ಲುವುದು ಸರಿಯಲ್ಲ, ಹಡಗಿಗೆ ಬೆಂಕಿ ಹತ್ತಿರುವುದರಿಂದ ಇನ್ನು ಸ್ವಲ್ಪ ಹೊತ್ತು ಇಲ್ಲಿ ನಿಂತರೆ ಸಾವು ಒದಗುವುದರಲ್ಲಿ ಸಂಶಯವಿಲ್ಲ. ಆದುದರಿಂದ ನಮ್ಮೊಡನೆ ಈಗಲೇ ನೀನು ಬಂದು ಬಿಡು ಎಂದು ಎಷ್ಟು ಹೇಳಿದರೂ ಈ ಬಾಲಕನು ತಂದೆಯ ಅಪ್ಪಣೆಗೆ ವಿರುದ್ಧವಾಗಿ ಆ ಸ್ಥಾನವನ್ನು ಬಿಡಲೊಪ್ಪಲಿಲ್ಲ. ಸ್ವಲ್ಪ ವೇಳೆಯಲ್ಲಿ ಆ ಹಡಗಿನೊಳಗಿನ ಮದ್ದಿನ ಖಜಾನೆಗೆ ಬೆಂಕಿಹತ್ತಿದುದರಿಂದ ಈ ವೀರಬಾಲಕನೊಡನೆ ಹಡಗವು ನಾಶವಾಗಿ ಹೋಯಿತು.

ಮಿಸೆಸ್ ಹಿಮಾನ್ಸ್ ಎಂಬವಳು—“But the nodlest thing that perished there was that young faithful heart”—“ಅಲ್ಲಿ ನಷ್ಟವಾದ ವಸ್ತುಗಳಲ್ಲೆಲ್ಲ ಆ ಬಾಲಕನ ಉಚ್ಚವಾದ ಹೃದಯವೇ ಎಲ್ಲಕ್ಕೂ ಹೆಚ್ಚಿನದು” ಎಂದು ಹೇಳಿದುದು ಯಥಾರ್ಥವಾಗಿರುವುದು.

---

ವಚನಪಾಲನ.

## ೮೨. ಬಲಿಚಕ್ರವರ್ತಿ.

ಪ್ರಾಚೀನಕಾಲದಲ್ಲಿ ದೈತ್ಯವಂಶದ ಬಲಿ ಎಂಬ ಚಕ್ರವರ್ತಿ ಆಗಿಹೋದನು. ಆತನ ಸಾಮ್ರಾಜ್ಯವು ತ್ರೈಲೋಕ್ಯವನ್ನು ವ್ಯಾಪಿಸಿತ್ತು. ಆತನ ಅಧಿಕಾರ ವೈಭವಗಳಿದಿರಿಗೆ ದೇವೇಂದ್ರನ ಆಟವೇನೂ ಸಾಗದಂತಾಯಿತು. ಆಗ ದೇವತೆಗಳೆಲ್ಲರೂ ದೈತ್ಯನಾದ ಬಲಿಯ ಏಳಿಗೆಯನ್ನು ಕಂಡು ಎದೆಗುಂದಿ ವಿಷ್ಣುವಿಗೆ ಮೊರೆಯಿಡಲು, ಆತನು ಬಲಿಯನ್ನು ಉಪಾಯದಿಂದ ನಿಗ್ರಹಿಸುವೆನೆಂದು ಸಂತಯಿಸಿದನು. ಒಂದಾನೊಂದು ದಿವಸ ಮಹಾವಿಷ್ಣುವು ವಾಮನಾಕಾರದ ಬಟು

ವಾಗಿ ಬಲಿರಾಜನ ಯಜ್ಞಮಂಟಪಕ್ಕೆ ಬಂದು ತನಗೆ ತನ್ನ ಮೂರು ಹೆಜ್ಜೆ
ಭೂಮಿಯನ್ನು ಕೊಡು ಎಂದು ಆತನನ್ನು ಕೇಳಿದನು. ವಾಮನನ ತೇಜಸ್ಸನ್ನು
ಕಂಡು ಮೆಚ್ಚಿ ಕೊಡುಗೈದೊರೆಯಾದ ಬಲಿಯು 'ಕೊಡುವೆನು' ಎಂದನು
ಅಷ್ಟರಲ್ಲಿ ದೈತ್ಯಗುರು ಶುಕ್ರಾಚಾರ್ಯನು, ಈತನು ಸಾಮಾನ್ಯ ಬ್ರಹ್ಮಚಾ
ಯಲ್ಲ, ಮಹಾವಿಷ್ಣುವೇ ನಿನ್ನ ನಿಗ್ರಹಕ್ಕೋಸ್ಕರ ಬಂದಿರುವನು, ಈತನಿ
ದಾನಮಾಡಿದರೆ ನೀನು ಕೆಡುವೆ ಎಂದು ಹೇಳಿದನು. ಆದರೆ ಒಮ್ಮೆ ಕೊಟ್ಟ
ಮಾತನ್ನು ತಿರುಗಿಸುವುದಕ್ಕೆ ಬಲಿಯು ಒಪ್ಪಲಿಲ್ಲ. ತನ್ನ ಮಾತಿನ ಮೇರೆಗೆ
ಮೂರುಪಾದ ಭೂಮಿಯನ್ನು ಅಳೆದುಕೊಳ್ಳೆಂದು ಬಟುವಿಗೆ ಹೇಳಿ ದಾನಜಲ
ವನ್ನು ಆತನ ಕೈಯಲ್ಲಿ ಬಿಡಹೋದನು. ಆಗ ದೈತ್ಯಾಭಿಮಾನಿಯಾದ ಶುಕ್ರಾ
ಚಾರ್ಯನು ನೀರಿನ ಪಾತ್ರೆಯಿಂದ ನೀರು ಬೀಳದಂತೆ ತಾನು ಅದರ ಬಾಯಿಗೆ
ಸೂಕ್ಷ್ಮರೂಪದಿಂದ ಹೋಗಿ ಕುಳಿತುಕೊಂಡನೆಂದೂ, ಬಲಿಯು ಸಲಾಕೆ
ಯಿಂದ ಚುಚ್ಚಿಸಿ ನೀರು ಬೀಳುವಂತೆ ಮಾಡಿದನೆಂದೂ ಆ ಸಲಾಕೆ ತಾಕಿ ಶುಕ್ರಾ
ಚಾರ್ಯರ ಒಂದು ಕಣ್ಣು ಒಡೆದುಹೋಯಿತೆಂದೂ ಹೇಳುವರು. ದಾನವಿಧಿ
ಮುಗಿಯಿತು. ವಾಮನನು ಒಂದು ಪಾದದಿಂದ ಪೃಥ್ವಿಯೆಲ್ಲವನ್ನೂ
ಇನ್ನೊಂದು ಪಾದದಿಂದ ಅಂತರಿಕ್ಷವೆಲ್ಲವನ್ನೂ ವ್ಯಾಪಿಸಿದನು; ಮೂರನೆಯ
ಪಾದಕ್ಕೆ ಸ್ಥಳವಿಲ್ಲದಂತಾಯಿತು. ಆಗ ಬಲಿಯು ತನ್ನ ತಲೆಯ ಮೇಲೆ
ಮೂರನೆಯ ಹೆಜ್ಜೆಯನ್ನು ಇಡಹೇಳಿದನು. ಮಹಾವಿಷ್ಣುವಿನ ಪಾದಭಾರ
ದಿಂದ ತಾನು ಪಾತಾಳಕ್ಕಿಳಿಯುವೆನೆಂದೆನಿಸಿದರೂ ಆತನು ಅಂಜಲಿಲ್ಲ. ವಿಷ್ಣುವು
ಬಲಿಯನ್ನು ಪಾತಾಳಕ್ಕೆ ಮೆಟ್ಟಿದನು. ಆದರೆ ಆತನ ವಚನಪಾಲನೆಗೆ ಮೆಚ್ಚಿ
ಆತನ ವೈಭವವು ಚಿರಕಾಲ ಪಾತಾಳದಲ್ಲಿ ನಡೆಯುವಂತೆಯೂ ತಾನು ಆತನ
ಬಳಿಯಲ್ಲಿ ಯಾವಾಗಲೂ ಇರುವಂತೆಯೂ ಅನುಗ್ರಹಿಸಿದನು.

---

ಪತಿನಿಷ್ಠೆ

## ೮೩. ಜಯಮತೀ ರಾಣಿ.

ಕ್ರಿ. ಶ. ೧೬೭೩ರಲ್ಲಿ ಚಕ್ರಧ್ವಜನೆಂಬ ರಾಜನು ಆಸಾಮದ ಸಿಂಹಾ
ಸನವನ್ನೇರಿ ಏಳು ವರ್ಷ ರಾಜ್ಯವಾಳಿ ಮಡಿದನು. ಆತನ ತರುವಾಯ ಯೋಗ್ಯ
ರಾದ ಅರಸರಿಲ್ಲದೆ ರಾಜ್ಯದಲ್ಲಿ ಅವ್ಯವಸ್ಥೆಯುಂಟಾಯಿತು. ಮಂತ್ರಿಗಳೂ, ಅಧಿ
ಕಾರಿಗಳೂ ಪ್ರಬಲರಾಗಿ ಯಾವನೊಬ್ಬ ರಾಜಕುಮಾರನನ್ನು ಪಟ್ಟಕ್ಕೆ ಕುಳ್ಳಿ

ರಿಸಿ ಆತನನ್ನು ತಮ್ಮ ಕೈಯೊಳಗಿನ ಬೊಂಬೆಯಂತೆ ನಡೆಸಿಕೊಳ್ಳುವರು. ಮೇಲೆಮೇಲೆ ಹೊಸ ಹೊಸ ರಾಜಕುಮಾರರನ್ನು ಪಟ್ಟಕ್ಕೆ ಕುಳ್ಳಿರಿಸುವರು. ಮುಂದೆ ಜೂಲಿಕ್‍ಷಾ ಎಂಬ ಹುಡುಗನನ್ನು ಪಟ್ಟಕ್ಕೆ ಕುಳ್ಳಿರಿಸಿದರು. ಆತನು ಸಣ್ಣವನು; ಅಶಕ್ತನು, ಆದರೆ ಬುದ್ಧಿವಂತನಾಗಿದ್ದನು. ಅಶಕ್ತತೆಯಿಂದ ಆತನ ಸ್ವಭಾವವು ಬಹು ಕ್ರೂರವಾಗಿತ್ತು. ಆತನು ಹಿಂದಿನವರಂತೆ ತನಗೂ ಪಟ್ಟದಿಂದ ದೂರವಾಗುವ ಪ್ರಸಂಗವು ಬಾರದಂತೆ ಮಾಡಲು ಯೋಚಿಸಿ ಸಿಂಹಾಸನಕ್ಕೆ ಅಧಿಕಾರ ತೋರಿಸುವ ಎಲ್ಲ ರಾಜಕುಮಾರರನ್ನು ನಾಶಗೊಳಿಸಲಾರಂಭಿಸಿದನು. ಅವರಲ್ಲಿ ಗದಾಪಾಣಿ ಎಂಬ ರಾಜಕುಮಾರನು ಅತ್ಯಂತ ತೇಜಸ್ವಿಯೂ ಬಲಿಷ್ಠನೂ ಇರುವನೆಂಬುದನ್ನು ಕೇಳಿ ಆತನ ಕೊಲೆಗೆ ಪ್ರಯತ್ನ ನಡೆಸಲು ಆ ಸುದ್ದಿಯನ್ನು ಆತನ ಮಡದಿ ಜಯಮತಿ ಎಂಬಾಕೆಯು ಕೇಳಿ ಪತಿಯನ್ನು ಕುರಿತು—ತಾವು ಈಗಲೇ ಇಲ್ಲಿಂದ ಓಡಿಹೋಗಿ ಜೀವವುಳಿಸಿಕೊಳ್ಳಿರಿ ಎಂದು ಹೇಳಿದಳು. ಹೆಂಡತಿ ಮಕ್ಕಳನ್ನು ಬಿಟ್ಟು ಹೋಗುವುದಕ್ಕೆ ಮನಸ್ಸು ಒಪ್ಪದಿದ್ದರೂ ಆತನು ಆ ಕಠಿಣಸಮಯದಲ್ಲಿ ಆಕೆಯ ಸಲಹೆಯಂತೆ ನಡೆದನು. ಇತ್ತ ಅರಸನ ಸೈನಿಕರು ಗದಾಪಾಣಿಯ ಮನೆಯನ್ನು ಮುತ್ತಿ, ಆತನನ್ನು ಹುಡುಕಿ ಸಿಕ್ಕದಿರಲು, ಜಯಮತಿಯನ್ನು ಕೇಳಿದರು. ಆಕೆ—ನನ್ನ ಪತಿಯ ವರ್ತಮಾನವನ್ನು ನಾನು ಎಂದೂ ಹೇಳಲಾರೆನು ಎಂದು ಖಂಡಿತವಾಗಿ ಹೇಳಿದಳು. ಸೈನಿಕರು ಈ ಸಮಾಚಾರವನ್ನು ಅರಸನಿಗೆ ಹೇಳಲು, ಆತನು ಕ್ರೋಧಾಂಧನಾಗಿ ಆಕೆಯನ್ನು ಹಿಡಿತರಿಸಿ—ಈಕೆ ಗಂಡನ ವರ್ತಮಾನವನ್ನು ಹೇಳುವ ವರೆಗೆ ಕಂಬಕ್ಕೆ ಕಟ್ಟಿ ಒಂದೇಸಮನೆ ಬೆತ್ತದಿಂದ ಹೊಡೆಯುತ್ತಿರಬೇಕು; ಜೀವಧಾರಣದ ಮಟ್ಟಿಗೆ ಅಲ್ಪಾಹಾರವನ್ನು ಕೊಡುತ್ತಿರಬೇಕು ಎಂದು ಆಜ್ಞಾಪಿಸಿದನು. ಜಯಮತಿಯ ಕಷ್ಟಕ್ಕೆ ಎಣೆಯಿಲ್ಲದಂತಾಯಿತು. ಗದಾಪಾಣಿಯು ಮಡದಿ ಪ್ರಾಣಸಂಕಟದಲ್ಲಿ ಸಿಲುಕಿರುವಳೆಂಬುದನ್ನು ಕೇಳಿ ಆ ಸ್ಥಳಕ್ಕೆ ಗುಪ್ತವೇಷದಿಂದ ಬಂದನು. ಮತ್ತು ಜಯಮತಿಗೆ—ಎಲೈ ರಾಜಕುಮಾರಿಯೇ, ಪತಿಯ ವರ್ತಮಾನವನ್ನು ಹೇಳಿ ಈ ಸಂಕಟದಿಂದ ಮುಕ್ತಳಾಗಬಾರದೇ? ಏಕೆ ವ್ಯರ್ಥವಾಗಿ ಸಾಯುತ್ತೀಯೆ ಎಂದು ಕೇಳಿದನು. ಆಗ ಜಯಮತಿ ಕಣ್ದೆರೆದು ನೋಡಿ ದನಿಯಿಂದ ಪತಿಯ ಗುರುತನ್ನು ಹಿಡಿದು, ಇಂತಹ ಗಂಡಾಂತರದ ಸ್ಥಳಕ್ಕೆ ಇವರೇಕೆ ಬಂದರು, ಯಾರಾದರೂ ಗುರುತಿಸಿ

ದರೆ ಸಹಜವಾಗಿ ಸಿಕ್ಕುವರಲ್ಲವೇ ಎಂದು ಚಿಂತಾಕ್ರಾಂತಳಾಗಿ ಗುರುತು ಹತ್ತದವಳಂತೆ ನಟಿಸಿ—ಈ ಜನರು ಸುಮ್ಮನೆ ನನಗೇಕೆ ತೊಂದರೆಕೊಡುವರು? ನಾನು ಪತಿಯ ವರ್ತಮಾನವನ್ನು ಎಂದೂ ಹೇಳಲಾರೆನೆಂದು ಒಮ್ಮೆ ನಿರ್ಣಯಿಸಿ ಬಿಟ್ಟಿರುವೆನು. ಪ್ರಾಣವು ಹೋಗುವದೆಂದು ನಿಶ್ಚಿತವಾಗಿ ತಿಳಿದಿದ್ದರೂ ನಾನು ಆ ಸಂಕಲ್ಪವನ್ನು ಬಿಡಲಾರೆನು. ನನಗೆ ಹೇಳಬಂದವರು ಇಲ್ಲಿಂದ ಈಗಲೇ ಹೊರಟುಹೋಗಬೇಕು ಎಂದು ಹೇಳಿ ಕಣ್ಣು ಮುಚ್ಚಿಕೊಂಡಳು. ಮೈಯೆಲ್ಲ ರಕ್ತಮಯವಾಗಿ ಹೋಗಿದೆ, ಬೆತ್ತದ ಹೊಡೆತಗಳು ಒಂದೇ ಸವನೆ ಬೀಳುತ್ತಿವೆ! ಆದರೂ ಪತಿಯ ಜೀವನಕ್ಕಾಗಿ ಅಷ್ಟು ಎಚ್ಚರ! ಆಗ ಗದಾಪಾಣಿಯು ಕಾಲೇಳದಿದ್ದರೂ ಅಲ್ಲಿಂದ ಹೊರಟು ಹೋಗಿ ಚೂಲಿಕ್‌ಪಾ ಅರಸನ ವಿರುದ್ಧವಾಗಿ ದಂಡನ್ನು ಕೂಡಿಸಿಕೊಂಡು ಯುದ್ಧಕ್ಕೆ ಬಂದನು. ಆದರೆ ಈ ಅವಧಿಯಲ್ಲಿ ೨೦–೨೫ ದಿವಸಗಳವರೆಗೆ ಒಂದೇಸವನೆ ನಿದ್ರಾಹಾರಗಳಿಲ್ಲದೆ ಬೆತ್ತದ ಹೊಡೆತಗಳನ್ನು ಸಹಿಸಿಕೊಳ್ಳುತ್ತ ಯಮಯಾತನೆಯಲ್ಲಿದ್ದ ಆ ಸಾಧ್ವಿಯು ಕೊನೆಗೆ ಪ್ರಾಣಬಿಟ್ಟಳು. ಈ ಜಯಮತೀ ರಾಣಿಯು, ಪತಿಯ ಸಲುವಾಗಿ ಆರ್ಯಮಹಿಳೆಯರು ಕಷ್ಟವನ್ನು ಎಷ್ಟು ಮಟ್ಟಿಗೆ ಸಹಿಸುವರೆಂಬುದನ್ನು ಜಗತ್ತಿಗೆ ತೋರ್ಪಡಿಸಿ ತನ್ನ ನಶ್ವರಶರೀರವನ್ನು ತ್ಯಜಿಸಿ ಸೀತಾ ಸಾವಿತ್ರಿಯರ ಮಾಲಿಕೆಯಲ್ಲಿ ಸೇರಿದಳು.

ಮುಂದೆ ಗದಾಪಾಣಿಯು ಚೂಲಿಕ್‌ಪಾ ಅರಸನನ್ನು ಸೋಲಿಸಿ ಆಸಾಮದ ಅರಸನಾದನು. ಇವನ ಮಗನು ತನ್ನ ತಾಯಿ ಮರಣಹೊಂದಿದ ಸ್ಥಲದಲ್ಲಿ ಆಕೆಯ ಹೆಸರಿನಿಂದ ಜಯಸಾಗರ ಎಂಬ ಬಹು ದೊಡ್ಡ ಪುಷ್ಕರಿಣಿಯನ್ನೂ, ಜಯದೋಲ ಎಂಬ ಸುಂದರವಾದ ದೇವಾಲಯವನ್ನೂ ಕಟ್ಟಿಸಿರುವನು. ಶಿವಸಾಗರ ಜಿಲ್ಹೆಯಲ್ಲಿ ಅವು ಈಗಲೂ ಮೆರೆಯುತ್ತಿವೆ.

---

ರಾಜೋಚಿತ ಉದಾರಭಾವ.

## ೪೪. ೩ನೆಯ ವಿಲ್ಯಮ್.

ಇಂಗ್ಲಂಡದ ಅರಸನಾದ ೩ನೆಯ ವಿಲ್ಯಮನ ವಿರುದ್ಧವಾಗಿ ಮತ್ತು ಸ್ಟೂಅರ್ಟ್ ಮನೆತನದ ಪದಚ್ಯುತರಾಜನಾದ ೨ನೆಯ ಜೇಮ್ಸನ ಪಕ್ಷಹಿಡಿದು ನಡೆದ ಒಳಸಂಚಿನಲ್ಲಿ ಸಮರ್ಥನಾದ ಒಬ್ಬ ಇಂಗ್ಲಿಷ್ ಸದ್ಗೃಹಸ್ಥನು

ಸೇರಿದ್ದನು. ಈ ವಿಷಯವಾಗಿ ಆತನು ನಡೆಸಿದ ಹಲವು ಗುಪ್ತವಾದ ಕಾಗದ ಪತ್ರಗಳು ವಿಲ್ಯಮ್‌ರಾಜನ ಕೈಗೆ ಸಿಕ್ಕಿದ್ದುವು. ಆತನು ಆ ಇಂಗ್ಲಿಷ್ ಗೃಹಸ್ಥನನ್ನು ತನ್ನ ಮನೆಗೆ ಕರೆಯಿಸಿ ಏಕಾಂತದಲ್ಲಿ ಆ ಕಾಗದಪತ್ರಗಳನ್ನು ಆತನ ಕೈಯಲ್ಲಿ ಕೊಟ್ಟನು. ಆ ಕಾಗದಪತ್ರಗಳನ್ನು ನೋಡಿದೊಡನೆ ಆ ಗೃಹಸ್ಥನು ಇನ್ನು ತನ್ನನ್ನು ಸೆರೆಯಿಡುವರೆಂದೂ, ಮುಂದೆ ವಿಚಾರಣೆಯಲ್ಲಿ ತನಗೆ ಮರಣಶಿಕ್ಷೆ ವಿಧಿಸಲ್ಪಡುವುದೆಂದೂ ತಿಳಿದನು. ಆದರೆ ಅರಸನು ಆತನನ್ನು ಕುರಿತು ಶಾಂತತನದಿಂದ—ಯಾವ ಜನರು ತಮ್ಮ ಒಡೆಯನಿಗೆ ದುರ್ದಶೆ ಒದಗಿದಾಗಲೂ ಆತನಲ್ಲಿ ಅನುರಕ್ತರಾಗಿ ಯಾವ ವಿಪತ್ತನ್ನೂ ಲೆಕ್ಕಿಸದೆ ಆತನ ಕಾರ್ಯದಲ್ಲಿ ತೊಡಗಿರುವರೋ ಆ ಜನರು ಲೋಕದಲ್ಲಿ ಮಾನ್ಯರು; ಅಂತಹವರ ಸ್ನೇಹವೇ ಜಗತ್ತಿನಲ್ಲಿ ಬಯಸತಕ್ಕುದು. ಅಂತಹ ಜನರ ಹಾನಿಯನ್ನು ನಾನು ಎಂದೂ ಮಾಡಲಾರೆನು ಎಂದು ಹೇಳಿ ತಾನೇ ತನ್ನ ಕೈಯಿಂದ ಆ ಕಾಗದಪತ್ರಗಳನ್ನು ದೀಪಕ್ಕೆ ಹಿಡಿದು ಸುಟ್ಟು ಆ ಗೃಹಸ್ಥನ ರಾಜದ್ರೋಹದ ಅಪರಾಧದ ಆಧಾರ (ಪುರಾವೆ) ಗಳನ್ನು ನಾಶಪಡಿಸಿದನು. ಆ ಗೃಹಸ್ಥನು ಈ ಸೌಜನ್ಯಕ್ಕೂ ಉದಾರಭಾವಕ್ಕೂ ಮೆಚ್ಚಿ ಈ ಮೇರೆಗೆ ನುಡಿದನು; "ದೇವರು ತಮ್ಮಂತಹ ಉಚ್ಚ ಮನಸ್ಸಿನ ವ್ಯಕ್ತಿಯನ್ನು ನಮ್ಮ ಮೊದಲಿನ ಒಡೆಯನ ವಿರೋಧಿಯನ್ನಾಗಿ ಕಳಿಸಿದುದರಿಂದ ಆತನ ದುರ್ದೈವವಿಲಾಸವನ್ನು ಮುಗಿಸುವುದು ಆತನ ಮನಸ್ಸಿನಲ್ಲಿರುವಂತೆ ತೋರಲಿಲ್ಲ; ನಾನು ನನ್ನ ಜೀವನವನ್ನು ಮೊದಲಿನ ಒಡೆಯನಿಗೋಸ್ಕರ ಅರ್ಪಿಸಿದ್ದೆನು; ಆದರೆ ಈ ಕಾಗದಪತ್ರಗಳು ತಮ್ಮ ಕೈಗೆ ಸಿಕ್ಕಿದಾಗಲೇ ನನ್ನ ಆ ಜೀವನವು ಮುಗಿದಂತಾಯಿತು; ಇನ್ನು ಮುಂದಿನ ನನ್ನ ಜೀವನವು ತಾವು ದಾನಕೊಟ್ಟು ಉಳಿಸಿದಂತಹುದು; ಈ ಜೀವನವನ್ನು ತಮ್ಮ ವಿರುದ್ಧವಾಗಿ ಉಪಯೋಗಿಸಿಕೊಳ್ಳುವುದಕ್ಕೆ ನನಗೆ ಅಧಿಕಾರವಿಲ್ಲ; ಇದು ತಮ್ಮ ಸ್ವಾಧೀನವಾಗಿ ದೇಶಕಾರ್ಯದಲ್ಲಿ ವಿನಿಯೋಗಿಸಲ್ಪಡುವುದು."

---

ನಿರಿಚ್ಛವೃತ್ತಿ.

## ೮೫. ಬೆಟ್ಟಗೇರಿ ಕೃಷ್ಣಶಾಸ್ತ್ರಿಗಳು.

ಕೆಲವು ವರ್ಷಗಳ ಹಿಂದೆ ಕೇಡಗಾಂವದ ಶ್ರೀನಾರಾಯಣ ಮಹಾರಾಜರೆಂಬ ಸಾಧುಪುರುಷರು ತಾವು ಹೊಸದಾಗಿ ವಸತಿಮಾಡಿಸಿದ 'ಬೇಟ'

ಎಂಬ ಸ್ಥಳದಲ್ಲಿ ಶ್ರೀದತ್ತಾತ್ರೇಯನ ಪ್ರತಿಷ್ಠೆ ಮಾಡಿಸಿದರು. ದೇವಾಲಯಕ್ಕೆ ಅನೇಕ ಸಹಸ್ರ ರೂಪಾಯಿಗಳು ವೆಚ್ಚವಾಗಿರುವುವಲ್ಲದೆ ಪ್ರತಿಷ್ಠೆಗೂ ಬಹು ಧನವನ್ನು ವೆಚ್ಚಮಾಡಿದರು. ಮಹಾರಾಷ್ಟ್ರ ಕರ್ನಾಟಕಗಳಿಂದ ಬಹುಜನ ವಿದ್ವಾಂಸರಾದ ಬ್ರಾಹ್ಮಣರು ಈ ಪ್ರತಿಷ್ಠಾಪನೆಗೆ ಹೋಗಿದ್ದರು. ಈ ಮಹಾ ಸಮಾರಂಭದಲ್ಲಿ ಧಾರ್ಮಿಕ ವಿಧಾನಗಳ ಮೇಲ್ವಿಚಾರಣೆಯ ಮುಖ್ಯ ಭಾರ ವನ್ನು ಮಹಾರಾಜರು ತಮ್ಮ ಅತ್ಯಂತ ವಿಶ್ವಾಸಪಾತ್ರವಾದ ಬೆಟ್ಟಗೇರಿ ಶ್ರೀಕೃಷ್ಣಶಾಸ್ತ್ರಿಗಳವರಿಗೆ ಒಪ್ಪಿಸಿದ್ದರು. ಶಾಸ್ತ್ರಿಗಳವರು ಮೊದಲೇ ಕೆಲವು ದಿವಸ ಅಲ್ಲಿಗೆ ಹೋಗಿ ಎಲ್ಲ ಧಾರ್ಮಿಕ ವಿಧಾನಗಳು ಸ್ವಲ್ಪವೂ ಲೋಪ ವಿಲ್ಲದೆ ಸಮರ್ಪಕವಾಗಿ ಜರುಗುವಂತೆ ಮಾಡಿದರು. ನೆರೆದ ಬ್ರಾಹ್ಮಣರೆಲ್ಲರು ತಲೆದೂಗಿದರು. ಮಹಾರಾಜರು ಬಹಳ ಸಮಾಧಾನಬಟ್ಟರು.

ಕೊನೆಗೆ ವಿದ್ವಾಂಸರಿಗೆ ಸಂಭಾವನೆಕೊಡುವ ಕೆಲಸವು ನಡೆಯಿತು. ಶಾಸ್ತ್ರಿಗಳವರು ಅವರವರ ಯೋಗ್ಯತಾನುಸಾರವಾಗಿ ಎಲ್ಲ ವಿದ್ವಾಂಸರಿಗೆ ಸಂಭಾವನೆಯನ್ನು ಕೊಡಿಸಿದರು. ಎಲ್ಲವೂ ಮುಗಿದ ಬಳಿಕ ಮಹಾರಾಜರು ಆ ಮಹಾಸಭೆಯಲ್ಲಿ ಶಾಸ್ತ್ರಿಗಳವರಿಗೆ ತಕ್ಕ ಮನ್ನಣೆಯನ್ನು ಮಾಡುವ ಉದ್ದೇಶದಿಂದ ಬಹುಮೂಲ್ಯವಾದ ಒಂದು ಶಾಲನ್ನು ಕೊಡಹೋದರು. ಮಹಾರಾಜರು ಶಾಸ್ತ್ರಿಗಳವರ ನಿರಿಚ್ಛವೃತ್ತಿಯನ್ನು ಅರಿತವರಾಗಿದ್ದರು. ಆದರೆ ವಿದ್ವದ್ರತ್ನವೆನಿಸಿದ ಶಾಸ್ತ್ರಿಗಳಿಗೆ ಸಭೆಯಲ್ಲಿ ತಕ್ಕ ಮರ್ಯಾದೆ ಮಾಡ ದಿರುವುದು ಅವರಿಗೆ ಸರಿದೋರದೆ ಹಾಗೆ ಕೊಡಹೋಗಿದ್ದರು. ಆದರೆ ಶಾಸ್ತ್ರಿ ಗಳವರು ಆಗ—ಮಹಾರಾಜರೇ, ನನಗೇಕೆ ಈ ಬಹುಮಾನ? ತಮ್ಮ ಕೃಪಾ ಕಟಾಕ್ಷವೊಂದಿದ್ದರೆ ಸಾಕು, ಈ ದೇಹದಿಂದ ಅಲ್ಪವಾದ ಸೇವೆ ಘಟಿಸಿದ್ದರೆ ಅದರಿಂದ ಶ್ರೀಮನ್ನಾರಾಯಣನು ತೃಪ್ತನಾಗಲಿ ಎಂದು ನುಡಿದು ಬಹು ವಿನಯದಿಂದ ಆ ಸಂಭಾವನೆಯನ್ನು ಸ್ವೀಕರಿಸಲಿಲ್ಲ. ತಪಸ್ಸಿನಿಂದ ಕೃಶವಾದ ಶರೀರ; ಮೈಮೇಲೆ ಮಾಸಿದ ದೋತ್ರಗಳು; ಆದರೆ ಮುಖದಲ್ಲಿ ವಿಲಕ್ಷಣ ವಾದ ಬ್ರಹ್ಮತೇಜಸ್ಸು, ಮನಸ್ಸಿನಲ್ಲಿ ದೃಢವಾದ ವೈರಾಗ್ಯ. ಈ ತರದ ಆ ಮಹನೀಯರ ಮುಖದಿಂದ ಹೊರಟ ಮಾತುಗಳನ್ನು ಕೇಳಿ ನೆರೆದ ಜನರೆಲ್ಲರು ತಲೆದೂಗಿದರು. ಶ್ರೀನಾರಾಯಣ ಮಹಾರಾಜರ ಕಣ್ಣುಗಳಿಂದ ಆನಂದಾ ಶ್ರುಗಳು ಹೊರಟವು!

ಕರ್ತವ್ಯನಿಷ್ಠೆ.

## ೮೬. ಇಂಗ್ಲಿಶ್ ಆಫಿಸರ್.

ಸಿಪಾಯಿಗಳ ಬಂಡಾಯದಲ್ಲಿ (೧೮೫೭) ವಿದ್ರೋಹಿಗಳಾದ ಸಿಪಾಯಿಗಳು ವೀರತದಿಂದ ದಿಲ್ಲಿಗೆ ಗುಂಪುಗುಂಪಾಗಿ ಬರುತ್ತಿರಲು, ದಿಲ್ಲಿಯೊಳಗಿನ ಇಂಗ್ಲಿಶ್ ಅಧಿಕಾರಿಗಳು ಹೆಂಡಿರುಮಕ್ಕಳೊಡನೆ ಕುದುರೆಗಳನ್ನೇರಿ ಬೇರೊಂದು ದಾರಿಯಿಂದ ಹೊರಗೆ ನಡೆದರು. ಅರ್ಧ ಮೈಲು ಹೋದ ಬಳಿಕ ಲೆಫ್ಟನಂಟ್ ಉಇಲೋಬಿ ಎಂಬವನು ಆಲೋಚಿಸಿದ್ದೇನೆಂದರೆ—ನಾನು ಈಗ ಇಲ್ಲಿಂದಹೊರಟು ಹೋಗುವುದು ತೀರ ಅನುಚಿತವು. ಏಕೆಂದರೆ, ಈಗ ಬರುವ ಸಿಪಾಯಿಗಳು ಇಲ್ಲಿಯ ಮದ್ದಿನ ಖಜಾನೆಯನ್ನು ಸ್ವಾಧೀನಮಾಡಿಕೊಳ್ಳುವರು. ಅಲ್ಲಿ ಇರುವ ತೋಫು ಮದ್ದು ಗುಂಡು ಇವುಗಳ ಬಲದಿದಂದ ಅವರು ಸರಕಾರದೊಡನೆ ಹೆಚ್ಚಿಗೆ ಸಾಮರ್ಥ್ಯದಿಂದ ಯುದ್ಧಮಾಡುವರು. ಅವರು ನಮ್ಮಿಂದಲೇ ಯುದ್ಧಕಲೆಯನ್ನು ಕಲಿತವರು; ಕೊನೆಯಲ್ಲಿ ಇಂಗ್ಲಿಷ ಸೇನೆಗೆ ಜಯವಾಗುವುದು ನಿಶ್ಚಯವಾದರೂ ಈಗ ಅವರ ಕೈಗೆ ಸಿಕ್ಕುವ ಮದ್ದಿನ ಖಜಾನೆಯ ಸಹಾಯದಿಂದ ಅವರು ಹತ್ತುಸಾವಿರಕ್ಕಿಂತ ಹೆಚ್ಚು ಇಂಗ್ಲಿಷ ಸೈನಿಕರನ್ನು ಕೊಂದುಬಿಡುವರು. ನನ್ನ ದೇಶದ ಜನಗಳ ಮೇಲೆ ಉಪಕಾರ ಮಾಡುವ ಸುಯೋಗವು ಇದಕ್ಕಿಂತ ಹೆಚ್ಚಿನದಾವುದೂ ಬರಲಾರದು. ಹೀಗೆ ಆಲೋಚಿಸಿ ಅವನು ತನ್ನಂತೆ ಹೊರಟಿದ್ದ ಬೇರೆ ಜನರನ್ನು ಕುರಿತು—ಬಾಂಧವರೇ, ನನ್ನ ಹೆಂಡತಿಮಕ್ಕಳನ್ನು ಕರೆದುಕೊಂಡು ಮುಂದೆ ನಡೆಯಿರಿ; ನಾನು ಒಂದು ಕೆಲಸವನ್ನು ಮರೆತುಬಂದಿದ್ದೇನೆ, ಆದುದರಿಂದ ಮರಳಿ ಹೋಗಬೇಕಾಗಿದೆ ಎಂದು ಹೇಳಿ ಹಿಂತಿರುಗಿದನು. ಆಗ ಅವನು ಕುದುರೆಯನ್ನೋಡಿಸುತ್ತ ನೆಟ್ಟಗೆ ಮದ್ದಿನ ಖಜಾನೆಯ ಕಡೆಗೆ ನಡೆದನು. ಸ್ವಲ್ಪ ವೇಳೆಯಲ್ಲಿ ಆ ಮದ್ದಿನ ಖಜಾನೆಯು ಆ ಇಂಗ್ಲಿಷ ವೀರನ ದೇಹದೊಡನೆ ಮಹಾಶಬ್ದದಿಂದ ಹಾರಿಹೋಯಿತು.

---

ಪರದ್ರವ್ಯವು ಲೋಷ್ಟಸಮಾನವು.

## ೮೭. ನೀಲಗುಂದದ ಗದಿಗಯ್ಯನವರು

ಹಲವರು ಸಾಧುಗಳೆಂದು ಬಯಲಿಗೆ ಬಾರದಿದ್ದರೂ ನಿಜವಾಗಿ ಸಾಧುಗಳಾಗಿರುವರು. ನೀಲಗುಂದದ ಗದಿಗಯ್ಯನವರು ಇಂತಹವರೊಳಗೊಬ್ಬರು. ಗದಿಗಯ್ಯನವರು ಒಂದು ದಿವಸ ನಸುಕಿನಲ್ಲಿ, ಎಂದಿನಂತೆ ಊರಹೊರಗಿನ ಬಾವಿಗೆ ಸ್ನಾನಕ್ಕೆ ಹೋಗಿದ್ದರು. ಸ್ವಲ್ಪಹೊತ್ತಿಗೆ ಮುಂಚೆ ಪರಸ್ಥಳದ ಒಬ್ಬ

ವ್ಯಾಪಾರಿಯೂ ಅದೇ ಬಾವಿಯಲ್ಲಿ ಸ್ನಾನಮಾಡಿ ಆ ಬಾವಿಯ ದಂಡೆಯಲ್ಲಿ ಹಣ ತುಂಬಿದ ಹಮ್ಮಿಣಿಯನ್ನು ಮರೆತುಹೋಗಿದ್ದನು. ಸ್ನಾನಮಾಡಿ ತಿರುಗಿ ಹೋಗುವಾಗ ಗದಿಗಯ್ಯನವರು ಆ ಹಮ್ಮಿಣಿಯನ್ನು ಕಂಡು ಅದೇ ಆಗ ಸ್ನಾನಮಾಡಿ ಹೋದ ಗೃಹಸ್ಥನೇ ಮರೆತುಹೋಗಿರುವನೆಂದು ತಿಳಿದು, ಅದನ್ನು ಅಲ್ಲಿಯೇ ಬಿಟ್ಟುಹೋದರೆ ಅನ್ಯರು ಕಂಡು ಅಪಹರಿಸುವರೆಂಬ ವಿಚಾರದಿಂದ ಆ ಹಮ್ಮಿಣಿಯನ್ನು ಕೈಯಿಂದ ಮುಟ್ಟದೆ ತಮ್ಮ ಕೋಲಿನ ತುದಿಗೆ ತಗುಲಿಸಿಕೊಂಡು ಮನೆಗೆ ತಂದು ಮನೆಯವರಿಗಾರಿಗೂ ತಿಳಿಯ ದಂತೆ ಜೋಡುಗಳನ್ನಿಡುವ ಗೂಡಿನಲ್ಲಿ ಹಿಂದೆ ಸರಿಸಿ ಇಟ್ಟುಬಿಟ್ಟರು. ಇತ್ತ ವ್ಯಾಪಾರಿಯು ಮುಂದಿನ ಊರಿಗೆ ಹೋಗಿ ಸಂತೆಯಲ್ಲಿ ತನ್ನ ಹಮ್ಮಿಣಿ ಯನ್ನು ನೋಡಿಕೊಂಡು ಕಾಣಿಸದಿರಲು, ಬಾವಿಯ ದಂಡೆಯಲ್ಲಿ ಇದಿರಿಗೆ ಬಂದಿದ್ದ ಅಯ್ಯನವರ ಮೇಲೆ ಸಂಶಯಗೊಂಡು ಅವರನ್ನು ಶೋಧಿಸುತ್ತ ಅವರ ಮನೆಗೆ ಬಂದನು. ಗದಿಗಯ್ಯನವರು ಹಣವನ್ನು ಕಳೆದುಕೊಂಡವನು ಅವನೇ ಎಂದು ನಂಬಿಗೆಯಾದ ಬಳಿಕ ನಾಲ್ವರನ್ನು ಕರೆಯಿಸಿ ಅವರ ಸಮಕ್ಷ ದಲ್ಲಿ ಜೋಡುಗಳ ಗೂಡಿನಲ್ಲಿರಿಸಿದ ಹಮ್ಮಿಣಿಯನ್ನು ಆತನಿಗೆ ತೋರಿಸಿದರು. ಅಯ್ಯನವರ ಮೇಲೆ ಸಂಶಯಗೊಂಡು ಬಂದ ಆ ವ್ಯಾಪಾರಿಯು ಪರದ್ರವ್ಯ ವನ್ನು ಹೆಂಟೆಗಿಂತ ಕೀಳಾಗಿ ಬಗೆದು, ಜೋಡು ಬಿಡುವ ಗೂಡಿನಲ್ಲಿರಿಸಿದ ಗದಿಗಯ್ಯನವರ ವಿರಕ್ತಭಾವವನ್ನು ಕಂಡು ಬೆರಗಾದನು. ಆಗ ಆ ವ್ಯಾಪಾ ರಿಯು ಅಯ್ಯನವರ ಮೇಲೆ ಭಕ್ತಿಯುಳ್ಳವನಾಗಿ—ಸ್ವಾಮೀ, ಪರರ ಹಣ ವನ್ನು ಅಪಹರಿಸುವ ಸಾಮಾನ್ಯ ಜನರಲ್ಲಿ ತಮ್ಮನ್ನೆಣಿಸಿ ತಮ್ಮ ಮೇಲೆ ಸಂಶಯದಿಂದ ಬಂದ ನನ್ನ ಅಪರಾಧವನ್ನು ಕ್ಷಮಿಸಿರಿ; ಮತ್ತು ಈ ಹಮ್ಮಿಣಿ ಯಲ್ಲಿರುವ ಎಂಟುನೂರು ರೂಪಾಯಿಗಳನ್ನು ತಾವೇ ಸ್ವೀಕರಿಸಿರಿ ಎಂದು ಬೇಡಿಕೊಂಡನು. ಆಗ ಅಯ್ಯನವರು ಆತನು ಬೇಕಾದಷ್ಟು ಬೇಡಿಕೊಂಡರೂ ಅದನ್ನು ಸ್ವೀಕರಿಸಲಿಲ್ಲವೆಂಬುದಷ್ಟೇ ಅಲ್ಲ, ತಮ್ಮ ಕೈಯಿಂದ ಯಾವು ದೊಂದು ಜನಹಿತದ ಕೆಲಸಕ್ಕೆ ವೆಚ್ಚ ಮಾಡುವುದಕ್ಕೂ ಒಪ್ಪದೆ ಆ ಗೃಹಸ್ಥ ನನ್ನು ಕುರಿತು ಈ ಕೈಪದ ಅಯ್ಯನಿಗೇತಕ್ಕೆ ಹಣವು? ನಾನು ಅದನ್ನು ಮುಟ್ಟಲಾರೆನು ಎಂದು ಹೇಳಿದರು. ಆಗ ವ್ಯಾಪಾರಿಯು ಆ ಊರ ಹೊರಗೆ ದಾರಿಕಾರರ ಉಪಯೋಗಕ್ಕಾಗಿ ಗದಿಗಯ್ಯನವರ ಹೆಸರಿನಿಂದ ಒಂದು ಬಾವಿ ಯನ್ನು ಕಟ್ಟಿಸಿದನು.

---

ಪತಿನಿಷ್ಠೆ.

## ನರಗುಂದದ ಸಾವಿತ್ರೀಬಾಯಿ.

ಸನ್ ೧೮೫೭ರ ಸುಮಾರಕ್ಕೆ ಧಾರವಾಡ ಜಿಲ್ಹೆಯ ನರಗುಂದದಲ್ಲಿ ಒಂದು ಬಂಡಾಯವೆದ್ದಿತು. ಮ್ಯಾನ್‌ಸನ್ ಸಾಹೇಬನ ಕೊಲೆಮಾಡಿದ ಆರೋಪವು ನರಗುಂದದ ಸಂಸ್ಥಾನಿಕನಾದ ಬಾಬಾಸಾಹೇಬನ ಮೇಲೆ ಬಂದಿತು. ಇಂಗ್ಲಿಷ್ ಸೈನಿಕರು ನರಗುಂದದ ಮೇಲೆ ದಂಡೆತ್ತಿ ನಡೆದರು. ಬಾಬಾಸಾಹೇಬನು ಸ್ವಯಂಶೂರನಾದರೂ ಕೈಕೆಳಗಿನ ಜನರ ಅವಿಶ್ವಾಸದಿಂದ ಪ್ರಬಲ ಪ್ರತಾಪರೂ ಬಹುಸಂಖ್ಯಾಕರೂ ಆದ ಇಂಗ್ಲಿಷ್ ಸೈನಿಕರನ್ನು ಇದಿರಿಸುವುದು ಆತನಿಗೆ ಅಸಾಧ್ಯವಾಯಿತು. ಆಗ ಆತನು ಮನೆಗೆ ಹೋಗಿ ತನ್ನ ಮಡದಿ ಸಾವಿತ್ರೀಬಾಯಿಯನ್ನೂ ವೃದ್ಧ ಮಾತೃಶ್ರೀಯವರನ್ನೂ ಕುರಿತು— ನನ್ನ ಮೇಲೆ ಭಯಂಕರವಾದ ಗಂಡಾಂತರವು ಒದಗಿದೆ. ಈಗ ನನ್ನನ್ನೇ ನಾನು ಕಾಪಾಡಿಕೊಳ್ಳಲಾರೆನು, ನಿಮ್ಮ ಗತಿಯನ್ನು ನೀವೇ ಕಂಡುಕೊಳ್ಳಬೇಕು ಎಂದು ಹೇಳಿ ಊರನ್ನು ಬಿಟ್ಟು ಹೊರಟುಹೋದನು. ಗಂಡನಿಗೆ ಪ್ರಾಣ ಸಂಕಟವೊದಗಿರುವುದನ್ನು ಕಂಡು ಆ ಪತಿವ್ರತೆ ಇನ್ನು ತಾನು ಬದುಕುವುದು ಉಚಿತವಲ್ಲೆಂದು ಬಗೆದಳು. ಸೊಸೆಯೂ ಅತ್ತೆಯೂ ಆಲೋಚನೆ ಮಾಡಿ ಅದೇ ದಿವಸ ಊರನ್ನು ಬಿಟ್ಟು ಹೊರಟುಹೋದರು. ಅವರು ಎಲ್ಲಾದರೂ ಹೋಗಿ ಪ್ರಾಣತ್ಯಾಗಮಾಡಿ ಮರ್ಯಾದೆಯನ್ನುಳಿಸಿಕೊಳ್ಳಬೇಕೆಂದು ಆಲೋಚಿಸಿದ್ದರು. ಪತಿಯು ನಿನ್ನ ಗತಿಯನ್ನು ನೀನೇ ಕಂಡುಕೊಳ್ಳು ಎಂದು ಹೇಳುವ ಮಟ್ಟಿಗೆ ಸಂಕಟದಲ್ಲಿ ಸಿಲುಕಿರುವಾಗ ತಾನು ಮರ್ಯಾದೆಯಿಂದ ಪ್ರಾಣಗಳನ್ನು ತೊರೆದು ಅಭಿಮಾನಿಯಾದ ತನ್ನ ಪತಿಗೆ ಸಮಾಧಾನವೆನಿಸುವಂತೆ ನಡೆಯಬೇಕೆಂದು ಆ ಸಾಧ್ವಿಯು, ಮಗನ ಪ್ರಾಣಸಂಕಟದಿಂದ ಮರಮರನೆ ಮರುಗುತ್ತಿರುವ ತನ್ನ ಅತ್ತೆಯೊಡನೆ ನರಗುಂದದಿಂದ ಒಂದು ಗಾವುದ ದೂರದಲ್ಲಿ ಮಲಪ್ರಭಾ ತೀರದಲ್ಲಿರುವ ಸಂಗಳ ಗ್ರಾಮಕ್ಕೆ ಬಂದಳು. ಇತ್ತ ಬಾಬಾಸಾಹೇಬನನ್ನೂ ಅವನ ಮನೆಯ ಜನರನ್ನೂ ಹುಡುಕುವುದಕ್ಕೆ ಆರಂಭವಾಗಿತ್ತು. ಮಲಪ್ರಭೆಗೆ ತಮ್ಮ ದೇಹಗಳನ್ನು ಅರ್ಪಿಸಿ ಇಹಲೋಕ ಯಾತ್ರೆಯನ್ನು ಮುಗಿಸಬೇಕೆಂದು ಆ ಅತ್ತೆಸೊಸೆಯರು ಒಬ್ಬರ ಸೆರಗಿಗೊಬ್ಬರು ಗಂಟನ್ನು ಹಾಕಿಕೊಂಡು ನಡುಮಟ್ಟ ನೀರೊಳಗೆ ನಡೆದುಹೋದರು. ಪತಿಯ ಮನಸ್ಸಿಗೆ ಸಮಾಧಾನವೆನಿಸುವಂತೆ ಮರ್ಯಾದೆಯಿಂದ ಪ್ರಾಣ

ಗಳನ್ನು ತೊರೆಯುವ ಯೋಗವು ಒದಗಿತೆಂದು ಸಮಾಧಾನ ಹೊಂದಿದ ಆ ಪತಿನಿಷ್ಠಳಾದ ಸೊಸೆಯು ಮೊದಲು ಧುಮುಕಿದಳೋ, ಮಗನ ಮುಂದಿನ ದುರ್ದೆಶೆಯನ್ನು ಭಾವಿಸಿ ಪ್ರಾಣತೊರೆಯಬೇಕೆಂದಿದ್ದ ಆ ಅತ್ತೆಯು ಮೊದಲು ಧುಮುಕಿದಳೋ ದೇವರೇ ಬಲ್ಲನು! ಇಬ್ಬರೂ ಜಲಸಮಾಧಿಯನ್ನೈದಿದರು.

ಸೌಜನ್ಯ.

## ೮೯. ಪಿಟೀಲುವಾದನ ಪಟು.

ವಿಯೆನ್ನಾ ಪಟ್ಟಣದಲ್ಲಿ ಒಬ್ಬ ಮುದುಕ ಕುರುಡ ತಿರಿಕನು ಮಾರ್ಗದ ದಂಡೆಗೆ ಕುಳಿತುಕೊಂಡು ದಿನಾಲು ಸಾಯಂಕಾಲ ಪಿಟೀಲು ಬಾರಿಸುವನು; ಮತ್ತು ತನ್ನ ಟೊಪ್ಪಿಗೆಯಲ್ಲಿ ಜನರು ದುಡ್ಡು ಕಾಸು ಒಗೆಯಬೇಕೆಂದು ಅದನ್ನು ತಿರುವಿ ಇಡುವನು. ದಯೆ ಬಂದವರು ದುಡ್ಡು ಕಾಸುಗಳನ್ನು ಅದರಲ್ಲಿ ಒಗೆಯುವರು. ಒಂದು ದಿವಸ ಸಂಜೆಯಾಗುತ್ತ ಬಂದರೂ ಟೊಪ್ಪಿಗೆಯಲ್ಲಿ ಒಂದು ದುಡ್ಡೂ ಬಿದ್ದಿರಲಿಲ್ಲ. ಆದುದರಿಂದ ಆ ಬಡ ತಿರಿಕನು ಬಳಲಿ ಪಿಟೀಲನ್ನು ಕೈಯಲ್ಲಿ ಹಿಡಿದುಕೊಂಡು ಸುಮ್ಮನೆ ಕುಳಿತಿದ್ದನು. ಒಬ್ಬ ಸದ್ಗೃಹಸ್ಥನು ಆ ಮಾರ್ಗದಿಂದ ಹೋಗುತ್ತಿರುವಾಗ ಆತನ ಅವಸ್ಥೆಯನ್ನು ಕಂಡು ಸಮೀಪಕ್ಕೆ ಬಂದು—ಅಯ್ಯಾ ನೀನು ದಣಿದಂತೆ ಕಾಣಿಸುವೆ; ನನಗೆ ನಿನ್ನ ಪಿಟೀಲನ್ನು ಸ್ವಲ್ಪ ಹೊತ್ತು ಕೊಡು, ನಾನು ಬಾರಿಸುವೆನು; ಜನರು ಭಿಕ್ಷೆಯನ್ನು ನೀಡುವರೋ ಇಲ್ಲವೊ ನೋಡುವ ಎಂದು ಹೇಳಿ ಆತನ ಕೈಯೊಳಗಿನ ಪಿಟೀಲನ್ನು ತೆಗೆದುಕೊಂಡು ಬಾರಿಸಲಾರಂಭಿಸಿದನು. ತಿರಿಕನ ಕಿವಿಯಲ್ಲಿ ಅಮೃತವನ್ನೆರೆದಂತಾಗಹತ್ತಿತು. ಅದರಿಂದ ಅವನು ತನಗೆ ಆ ದಿವಸ ಭಿಕ್ಷೆ ದೊರೆಯಲಿಲ್ಲೆಂಬ ಚಿಂತೆಯನ್ನು ಬಿಟ್ಟು ಉಲ್ಲಾಸದಿಂದ ಕೇಳಲಾರಂಭಿಸಿದನು. ಬಹು ಮಧುರವಾದ ಆ ವಾದನಕ್ಕೆ ಮರುಳಾಗಿ ಬಹುಜನರು ಅಲ್ಲಿ ನೆರೆದರು. ಸ್ವಲ್ಪ ವೇಳೆಯಲ್ಲಿ ಆ ಮುದುಕನ ಟೊಪ್ಪಿಗೆ ಚಿನ್ನಬೆಳ್ಳಿಗಳ ನಾಣ್ಯಗಳಿಂದ ತುಂಬಿಹೋಯಿತು. ಈ ದಿವಸ ವಿಯೆನ್ನಾ ಪಟ್ಟಣದಲ್ಲಿ ಎಲ್ಲರಿಗಿಂತ ಮಿಗಿಲಾದವನೂ, ಯುರೋಪದಲ್ಲಿ ಪ್ರಖ್ಯಾತನೂ ಆದ ವಾದನಪಟು ಗೃಹಸ್ಥನು ಆ ಕುರುಡ ಮುದುಕನಿಗೆ ಉಪಕಾರ ಮಾಡಬೇಕೆಂದು ಬಾರಿಸಲಾರಂಭಿಸಿದ್ದನು. ಆತನು ತನ್ನ ಬಳಿಯಲ್ಲಿದ್ದ ಒಂದು ಮೊಹರನ್ನು ಆ ಭಿಕ್ಷುಕನಿಗೆ ಕೊಟ್ಟಿದ್ದರೂ ಒಳ್ಳೆಯ ದಾನವನ್ನು ಮಾಡಿದಂತಾಗುತ್ತಿತ್ತು. ಆದರೆ ಇಷ್ಟೊಂದು ಸೌಜನ್ಯವು ಪ್ರಕಟಿತವಾಗುತ್ತಿರಲಿಲ್ಲ.

ರಾಷ್ಟ್ರಭಕ್ತಿ.

## ೯೦. ಸಖಾರಾಮ ಬಾಪು.

ಸಖಾರಾಮ ಬಾಪು ಎಂಬವನು ಮಹಾರಾಷ್ಟ್ರ ರಾಜ್ಯದಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿದ ಸರದಾರನು. ಸನ್ ೧೭೭೮ ರಲ್ಲಿ ಯಾರೋ ಒಬ್ಬರು ಈತನ ಬಳಿಗೆ ಬಂದು—ಪೇಶವೆಯು ನಿಮ್ಮನ್ನು ಸೆರೆಹಿಡಿಯುವವ ನಿದ್ದಾನೆ; ನಿಜಾಮಸರಕಾರದಲ್ಲಿ ನಿಮ್ಮ ಪ್ರತಿಷ್ಠೆ ಚೆನ್ನಾಗಿದೆ. ಆದುದರಿಂದ ನೀವು ನಿಜಾಮನಿಗೆ ಈ ಮಾತನ್ನು ತಿಳಿಸಿದರೆ ಆತನು ನಿಮ್ಮನ್ನು ಸೆರೆಹಿಡಿಯ ದಂತೆ ಮಾಡುವನು ಎಂದು ಹೇಳಿದರು. ಈ ಸುದ್ದಿ ನಿಜವೆಂದು ತಿಳಿದಿದ್ದರೂ ಬಾಪು ಸಖಾರಾಮನು-ನಮ್ಮ ರಾಜ್ಯದಲ್ಲಿ ನಾವೇ ಶತ್ರುಗಳನ್ನು ಸೇರಿಸು ವುದು ಸರಿಯಲ್ಲ; ಈ ಸಮಯದಲ್ಲಿ ನನಗೆ ಏನು ಆಗುವದಿದೆಯೋ ಅದೆ ಲ್ಲವೂ ಆಗಲಿ; ನಾನು ಯಾವ ಶತ್ರುವನ್ನೂ ಮರೆಹೊಕ್ಕು ಸ್ವಹಿತವನ್ನು ಸಾಧಿಸಿಕೊಳ್ಳಲಾರೆನು; ಕ್ಷುದ್ರವಾದ ಸ್ವಾರ್ಥಕ್ಕಾಗಿ ನಮ್ಮ ರಾಷ್ಟ್ರದ ಕಡುಹಗೆಯಾದ ನಿಜಾಮನ ಸಾಹಾಯ್ಯವನ್ನಪೇಕ್ಷಿಸುವ ದೇಶದ್ರೋಹ ವನ್ನು ನಾನು ಮಾಡಲಾರೆನು ಎಂದು ಹೇಳಿದನು.

---

ಆರ್ತರಲ್ಲಿ ದಯೆ.

## ೯೧ ಬಂಗಾರದ ಬಟ್ಟಲು

ಬಂದಾನೊಂದು ಕಾಲದಲ್ಲಿ ಕಾಶಿಯ ಶ್ರೀವಿಶ್ವೇಶ್ವರನ ಗುಡಿಯಲ್ಲಿ ಸ್ವರ್ಗಲೋಕದಿಂದ ಒಂದು ಬಂಗಾರದ ಬಟ್ಟಲು ಬಿದ್ದಿತಂತೆ. ಆ ಬಟ್ಟಲ ಮೇಲೆ 'ಎಲ್ಲಕ್ಕೂ ಹೆಚ್ಚಿಗೆ ದಯೆಯುಳ್ಳವನಿಗೋಸ್ಕರ ಇದೀಗ ಸ್ವರ್ಗ ಲೋಕದ ಪಾರಿತೋಷಿಕವು' ಎಂದು ಬರೆದಿತ್ತು. ದೇವಾಲಯದ 'ಪಾಂಡಾ' ಜನರು ಈ ಪಾರಿತೋಷಿಕವನ್ನು ಬಯಸುವವರು 'ಈ ದಿವಸ ಮಧ್ಯಾಹ್ನ ದಲ್ಲಿ ತಮ್ಮ ತಮ್ಮ ಪಾತ್ರತೆಯನ್ನು ತೋರ್ಪಡಿಸಬೇಕು' ಎಂದು ಡಂಗುರವ ಸಾರಿದರು. ಎಲ್ಲ ವರ್ಗಗಳ ಜನರು ಬಂದು ಬಂದು ತಂತಮ್ಮ ಗುಣಗಳನ್ನೂ ಧರ್ಮಕೃತ್ಯಗಳನ್ನೂ ಹೇಳಿಕೊಳ್ಳಲಾರಂಭಿಸಿದರು. ಒಬ್ಬ ಸಾವುಕಾರನು ತನ್ನ ಸಂಪತ್ತನ್ನೆಲ್ಲ ಬಡಬಗ್ಗರಿಗೆ ದಾನಮಾಡಿ ಕಾಶಿಗೆ ಬಂದಿದ್ದನು. ಪಾಂಡಾ ಜನರು ಆತನಿಗೆ ಈ ಬಟ್ಟಲನ್ನು ಕೊಟ್ಟರು. ಆದರೆ ಕೊಟ್ಟ ಕೂಡಲೆ ಆ ಬಟ್ಟಲು ಸೀಸದ್ದಾಯಿತು. ಆಗ ಆ ಸಾವುಕಾರನು ನಾಚಿ ಅದನ್ನು ಕೆಳಗಿರಿ

ಸಿದನು, ಕೂಡಲೆ ಅದು ಮತ್ತೆ ಬಂಗಾರದ್ದಾಯಿತು. ಪಾರಿತೋಷಿಕಕ್ಕಾಗಿ ಬಂದವರು ಗುಡಿಯ ಬಳಿಯಲ್ಲಿದ್ದ ಬಡವರಿಗೆ ದಾನಮಾಡಲಾರಂಭಿಸಿದರು. ಆದರೆ ಹಣವನ್ನು ದಾನಮಾಡುವುದೇ ದಯೆಯ ಮುಖ್ಯ ಲಕ್ಷಣವಲ್ಲ. ಗುಡಿಯ ನೆರೆಯಲ್ಲಿಯೇ ದಾರಿಯಲ್ಲಿ ಒಬ್ಬ ಬಡವನು ಬೇನೆಯಿಂದ ಬಳಲುತ್ತ ಬಿದ್ದಿದ್ದನು. ಆತನನ್ನು ಇವರಲ್ಲಾರೂ ನೋಡಲೊಲ್ಲರು. ಇಷ್ಟರಲ್ಲಿ ಒಬ್ಬ ಒಕ್ಕಲಿಗನು ಗುಡಿಗೆ ಪೂಜೆಗೆ ಹೊರಟವನು ದಾರಿಯಲ್ಲಿ ಆ ರೋಗಿಯನ್ನು ಕಂಡನು. ಕೂಡಲೆ ಮನನುರುಗಿ ಆ ರೋಗಿಯ ಬಳಿಗೆ ಹೋಗಿ ಆತನ ಒಣ ಬಾಯಲ್ಲಿ ಸ್ವಲ್ಪ ನೀರನ್ನು ಬಿಟ್ಟನು. ಅದರಿಂದ ರೋಗಿಯ ಗಂಟಲು ಹಸಿಯಾಯಿತು. ಬಳಿಕ ಹಾಲನ್ನು ತಂದು ಹನಿಹನಿಯಾಗಿ ಆತನ ಬಾಯಲ್ಲಿ ಹಾಕುತ್ತಿರಲು, ರೋಗಿಯು ಸ್ವಲ್ಪ ಸಮಾಧಾನಹೊಂದಿದನು. ತರುವಾಯ ಆತನನ್ನು ಸಮೀಪದ ಧರ್ಮಶಾಲೆಯ ಒಂದು ಕೋಣೆಯಲ್ಲಿ ಒಯ್ದು ಮಲಗಿಸಿ ಬಳಿಕ ಗುಡಿಗೆ ಬಂದನು. ಪಾಂಡಾ ಜನರ ಮುಖ್ಯನು ಒಕ್ಕಲಿಗನ ಈ ಕೃತ್ಯವನ್ನು ನೋಡುತ್ತಿದ್ದನು. ಬಳಿಕ ಆ ಒಕ್ಕಲಿಗನನ್ನು ಕರೆದು ಅವನ ಕೈಯಲ್ಲಿ ಆ ಬಟ್ಟಲನ್ನು ಕೊಡಲು ಅದು ಮೊದಲಿಗಿಂತ ಥಳಥಳ ಹೊಳೆಯ ತೊಡಗಿತು.

---

ಸ್ವಾಮಿಭಕ್ತಿ.

## ೬೨. ರೇಟರೇಯ ತ್ರ್ಯಂಬಕರಾಯ.

ಮೊದಲನೆಯ ಪೇಶವೆಯಾಗಿ ಪ್ರಸಿದ್ಧಿಗೆ ಬಂದ ಬಾಳಾಜಿಯು ಮೊದಲು 'ದಾಭಾಡೆ' ಸೇನಾಪತಿಯ ಬಳಿಯಲ್ಲಿ ನೌಕರಿ ಮಾಡುತ್ತಿದ್ದನು. ಅಲ್ಲಿ ಅವನ ಪ್ರತಿನಿಧಿಯಾದ ಪಾನಶೆ ಭಿವ (ಭೀಮ) ರಾವ ಎಂಬವರು ಬಾಳಾಜಿಯ ಯೋಗ್ಯತೆಯನ್ನರಿತು ಅವನನ್ನು ಮೇಲು ಮೇಲಿನ ಅಧಿಕಾರಸ್ಥಳಗಳಲ್ಲಿ ನಿಯಮಿಸುತ್ತ ನಡೆದರು. ಬರಬರುತ್ತ ಬಾಳಾಜಿಗೂ ಭಿವರಾಯರಿಗೂ ಸ್ನೇಹವುಂಟಾಯಿತು. ಒಂದು ಸಾರೆ ಬಾಳಾಜಿಗೆ ಗಂಡಾಂತವೊದಗಲು, ಭಿವರಾಯರು ಅದರೊಳಗಿಂದ ಆತನನ್ನು ಉಳಿಸಿದರು. ಬಾಳಾಜಿಯು ಮುಂದೆ ಏರುತ್ತೇರುತ್ತ ಛತ್ರಪತಿಯ ಮುಖ್ಯ ಪ್ರಧಾನನಾದನು. ಆಗ ರೇಟರೆಯ ಭಿವರಾಯರ ಉಪಕಾರವನ್ನು ಸ್ಮರಿಸಿ ಬಾಳಾಜಿಯು ಅವರ ಮನೆತನದವರಿಗೆ ವಂಶಪರಂಪರೆಯಾಗಿ ತಮ್ಮಲ್ಲಿ ಸರದಾರಿಕೆಯ ನೌಕರಿಯನ್ನು ಕೊಟ್ಟನು.

'ಪೇಶವಾಯಿ'ಯು ಮುಳುಗುವ ಹೊತ್ತಿಗೆ ಎಲ್‌ಫಿನ್‌ಸ್ಟನ್ ಸಾಹೇಬನು—ಇಂತಿಷ್ಟು ದಿವಸಗಳಲ್ಲಿ ಬಾಜೀರಾಯನನ್ನು ಬಿಟ್ಟು ಬಂದ ಸರದಾರರಿಗೆ ಅವರವರ ಜಹಗೀರುಗಳು ನಡೆಸಲ್ಪಡುವುವು; ಬಾರದವರ ಜಹಗೀರುಗಳು ಇಂಗ್ಲಿಷ್ ಸರಕಾರಕ್ಕೆ ಸೇರಿಸಲ್ಪಡುವುವು; ಎಂದು ಪ್ರಸಿದ್ಧಿಪತ್ರಿಕೆಯನ್ನು ಪ್ರಕಟಿಸಿದನು. ಆಗ ಪ್ರತಿನಿಧಿ ಮೊದಲಾದ ಪೇಶವೆಗೆ ಸಮಾನರಾದ ಸರದಾರರೂ, ಪಟವರ್ಧನ ಮೊದಲಾದ ಪೇಶವೆಯ ಆಶ್ರಯದಿಂದ ಘನತೆ ಹೊಂದಿದ ಸರದಾರರೂ ತಮ್ಮ ಒಡೆಯನಾದ ಬಾಜೀರಾಯನನ್ನು ಬಿಟ್ಟು ಬಂದು ತಂತಮ್ಮ ಜಹಗೀರುಗಳನ್ನು ಹೊಂದಿದರು. ಆ ಕಾಲದಲ್ಲಿ ರೇಟರೆಯ ಭೀಮರಾಯರ ವಂಶದ ತ್ರ್ಯಂಬಕರಾಯನು ಬಾಜೀರಾಯನ ಬಳಿಯಲ್ಲಿ ಸರದಾರನಾಗಿದ್ದು ಅವನೊಡನೆ ತಿರುಗುತ್ತಿದ್ದನು. ಎಲ್‌ಫಿನ್‌ಸ್ಟನ್ ಸಾಹೇಬರ ಸಹಾಯಕನಾದ ನಾತು ಬಾಳಾಜಿಪಂತನು ತ್ರ್ಯಂಬಕರಾಯನನ್ನು ಕುರಿತು—ನಿಮ್ಮಂತಹ ಸರದಾರರು ಇನ್ನು ಬೇಕಾದಷ್ಟು ಹೆಣಗಿದರೂ ಪೇಶವಾಯಿಯು ಉಳಿಯುವುದಿಲ್ಲ. ಆದುದರಿಂದ ಎಲ್‌ಫಿನ್‌ಸ್ಟನ್ ಸಾಹೇಬನ ಅಭಿಪ್ರಾಯದಂತೆ ನಡೆದು ನಿಮ್ಮ ಜಹಗೀರನ್ನು ಉಳಿಸಿಕೊಳ್ಳುವುದು ಉಚಿತವು ಎಂದು ಉಪದೇಶಿಸಿದನು. ಆಗ ತ್ರ್ಯಂಬಕರಾಯನು—ನೀವು ಹೇಳುವುದು ಹೇವಕ್ಕೆ ತಕ್ಕ ಮಾತಲ್ಲ; ನಮ್ಮ ಕುಲಕರಣಿಕೆಯು, ಮತ್ತು ಪಂಚಾಂಗದ ಗಂಟನ್ನು ಯಾರೂ ಕಿತ್ತುಕೊಳ್ಳುವುದಿಲ್ಲ. ಅವು ಉಳಿದರೆ ಸಾಕು, ನಾನು ನನ್ನ ಒಡೆಯನ ಸಂಗಡ ಅಡವಿಯಲ್ಲಿ ಗಿಡಗೆಲೆಗಳನ್ನು ತಿನ್ನುತ್ತ, ಬಂದ ಕಷ್ಟವನ್ನು ಅನುಭೋಗಿಸುತ್ತ ತಿರುಗುವೆನು; ಆದರೆ ಅಪನಂಬುಗೆಯ ಕೆಲಸವನ್ನು ಮಾಡಲಾರೆನು ಎಂದು ಹೇಳಿದನು. ಕೊನೆಗೆ 'ಪೇಶವಾಯಿ'ಯು ಮುಳುಗಿತು; ರೇಟರೆಯ ಜಹಗೀರು 'ಖಾಲಸಾ' ಆಯಿತು. ಆದರೆ ತ್ರ್ಯಂಬಕರಾಯನು ಒಡೆಯನನ್ನು ಬಿಟ್ಟು ಬರಲಿಲ್ಲ. ಕೊನೆಗೆ ಇಂಗ್ಲಿಷ್ ಸರಕಾರದವರು ಆತನ ಅಭಿಮಾನವನ್ನು ಮತ್ತು ಸ್ವಾಮಿನಿಷ್ಠೆಯನ್ನು ಕಂಡು ಕೆಲವು ಊರುಗಳ ಜಹಗೀರನ್ನು ಅವನಿಗೆ ಕೊಟ್ಟು ಇನೆಯ ತರಗತಿಯ ಸರದಾರರಲ್ಲಿ ಅವನ ವಂಶವರನ್ನು ಎಣಿಸುತ್ತ ಬಂದಿರುವರು.

———

ನಿರಭಿಮಾನ.

## ೯೩. ಪುರಂದರೆ ಜೋಯಿಸರು.

ಮಹಾರಾಷ್ಟ್ರದಲ್ಲಿರುವ 'ಕೋಡಿತ' ಎಂಬ ಗ್ರಾಮವು 'ಪುರಂದರೆ' ಜೋಯಿಸರ ಜ್ಯೋತಿಷ್ಯದ ಹಳ್ಳಿಯು. ಅಲ್ಲಿಯ ಗೌಡನ ಮನೆಯಲ್ಲಿ ಬ್ರಾಹ್ಮಣಸಂತರ್ಪಣವಿದ್ದಾಗ ಜೋಯಿಸರು ಬಂದು ಅಡಿಗೆ ಮಾಡುವುದು ಬಡಿಸುವುದು ಈ ಎಲ್ಲ ಕೆಲಸಗಳನ್ನು ಮಾಡುವ ವಾಡಿಕೆ ಇದ್ದಿತು. ಹೀಗಿರುವಾಗ ಒಂದು ದಿವಸ ಬ್ರಾಹ್ಮಣಸಂತರ್ಪಣವಿದ್ದುದರಿಂದ ಗೌಡನು ಜೋಯಿಸರಿಗೆ ಹೇಳಿಕಳುಹಿದನು. ಈ ಕಾಲದಲ್ಲಿ ಈ ಜೋಯಿಸರು ಗಜಾಂತ ಲಕ್ಷ್ಮಿಯ ಒಡೆಯರು. ಆದುದರಿಂದ ಅವರು ತಾವೇ ಹೋಗದೆ ತಮ್ಮ ಕೈಕೆಳಗಿನ ಒಬ್ಬ ಮನುಷ್ಯನನ್ನು ಕಳುಹಿದರು. ಗೌಡನು ಅಭಿಮಾನಿ; ಬೇರೊಬ್ಬನು ಬಂದುದನ್ನು ನೋಡಿ ಅವನನ್ನು ಜರೆದು—ನೀನಾರು ಇಲ್ಲಿ ಬರುವವನು? ಜೋಯಿಸನೇ? ಜೋಯಿಸನ ಹೊಟ್ಟೆ ದೊಡ್ಡದಾದುದರಿಂದ ಅವನಿಗೆ ಬರುವುದಕ್ಕೆ ಆಗಲಾರದಲ್ಲವೇ? ಬರುವುದಿದ್ದರೆ ಆತನೇ ಬರಬೇಕು; ಆತನ ಹೆಂಡತಿಯೇ ಅಡಿಗೆಮಾಡಬೇಕು; ಇಲ್ಲವಾದರೆ ಈವೂರ ಜ್ಯೋತಿಷ್ಯದ ವೃತ್ತಿಯನ್ನು ಬಿಟ್ಟುಬಿಡಬೇಕು; ಎಂದು ಬಿರುನುಡಿಗಳನ್ನಾಡಿ ಕಳುಹಿದನು. ಇದನ್ನು ಕೇಳಿ ಜೋಯಿಸರು—ಅಹುದು, ನಾನು ತಪ್ಪಿದೆನು; ಈ ಪಲ್ಲಕ್ಕಿಮೇಣೆಗಳು ನಾಲ್ಕು ದಿವಸದವು. ನಮ್ಮ ಜ್ಯೋತಿಷ್ಯವೃತ್ತಿಯು ಕಡೆತನಕ ನಡೆಯುವಂಥದು, ಅದನ್ನು ಬಿಟ್ಟು ಮಾಡುವುದೇನು? ನಾನೇ ಹೋಗಬೇಕಾದುದು ವಾಸ್ತವ ಎಂದು ನೆನೆದು ತನ್ನ ಹೆಂಡತಿಯ ಬಳಿಗೆ ಬಂದು—ಬಾಯಿಸಾಹೇಬ, ಯಜಮಾನರ ಮನೆಯಲ್ಲಿ ಯಜಮಾನಕೃತ್ಯವನ್ನು ಮಾಡುವುದಕ್ಕೆ ಹೋಗಬೇಕಾಗಿದೆ, ನಡೆಯಿರಿ ಎಂದು ಹೇಳಿ ಅವಳೊಡನೆ ಕೋಡಿತ ಗ್ರಾಮಕ್ಕೆ ಬಂದು ಅಡಿಗೆ, ನೀರು, ಬಡಿಸುವುದು ಮೊದಲಾಗಿ ಎಲ್ಲ ಕೆಲಸಗಳನ್ನು ಮಾಡಿದರು. ಕೊನೆಯಲ್ಲಿ ಈ ಜೋಯಿಸರೇ ಬ್ರಾಹ್ಮಣರ ಎಂಜಲೆಲೆಗಳನ್ನು ಎತ್ತುವುದನ್ನು ನೋಡಿ ಗೌಡನ ಮನಸ್ಸು ಕರಗಿತು. ಆಗ ಗೌಡನು ಆ ಜೋಯಿಸರ ಹತ್ತಿರ ಬಂದು—ಸ್ವಾಮಿ, ಈ ಎಂಜಲು ಹಿಡಿದು ಹೊಲಸಾಗಿರುವ ತಮ್ಮ ಕೈಗಳನ್ನು ತೊಳೆದುಕೊಳ್ಳುವುದಕ್ಕೆ ಒಂದು ಹೊಲವನ್ನು ಇನಾಮವಾಗಿ ಕೊಡುತ್ತೇನೆ, ಸನದನ್ನು ಹಿಡಿಯಿರಿ ಎಂದು ಹೇಳಿ ಆಗಲೇ ಹೊಲದ ಸನದನ್ನು ಮಾಡಿಕೊಟ್ಟನು. ಇದಲ್ಲದೆ

ಇನ್ನೂ ಕೆಲವು ಸಂಭಾವನೆಯನ್ನು ಆ ಜೋಯಿಸರಿಗೆ ಮಾಡಿದನು. ಈ 'ಕೈತೊಳೆದುಕೊಳ್ಳುವ' ಹೊಲವು ಪುರಂದರೆ ಜೋಯಿಸರಿಗೆ ಈ ಹೆಸರಿನಿಂದಲೇ ಈಗಲೂ ನಡೆಯುತ್ತಿರುವುದು.

ಸ್ವದೇಶಭಕ್ತಿ.

## ೯೪. ಗಜ್‌ಮ್ಯಾನ್.

ಸ್ಪೇನದಲ್ಲಿ ಮೂರ್ ಎಂದರೆ ಮುಸಲ್ಮಾನ ಜನರ ಪ್ರಾಬಲ್ಯವು ನಷ್ಟವಾಗುತ್ತ ಬಂದ ಕಾಲದಲ್ಲಿ ಸ್ಪೇನದ ಅರಸನಾಗಿದ್ದ ೫ನೆಯ ಸಾಂಕೊವಿಗೂ ಆತನ ಸೋದರನಾದ ಜುಯಾನನಿಗೂ ಕಲಹವುಂಟಾಯಿತು. ಜುಯಾನನು ಮೂರರ ಆಶ್ರಯಕ್ಕೆ ಹೋಗಿ ೫ ಸಾವಿರ ಮುಸಲ್ಮಾನಸೈನ್ಯವನ್ನು ತನ್ನ ಸ್ವಾಧೀನದಲ್ಲಿ ಕೊಟ್ಟರೆ ಭದ್ರವಾದ 'ಟಾರಿಫಾ' ಕೋಟೆಯನ್ನು ಆಕ್ರಮಿಸಿ ಅದನ್ನು ಮೂರರ ಸ್ವಾಧೀನಪಡಿಸುವೆನೆಂದು ಹೇಳಿದನು. ಜುಯಾನನು ಕಲಹ ಹೂಡುವುದಕ್ಕೆ ಮುಂಚೆ ಟಾರಿಫಾ ಕೋಟೆಯ ಕಿಲ್ಲೆದಾರನಾದ ಆಲನಜೋಪೇರೇಜ ಡಿ ಗಜ್‌ಮ್ಯಾನನ ಹಿರಿಯ ಮಗನು ಜುಯಾನನ ಬಳಿಯಲ್ಲಿ ನೌಕರಿಮಾಡುತ್ತಿದ್ದನು. ಜುಯಾನನು ಈಗ ಆತನನ್ನು ಬಿಡಲಿಲ್ಲ. ಮತ್ತು ಮುಸಲ್ಮಾನ ಸೈನ್ಯವನ್ನು ತಂದು ಟಾರಿಫಾ ಕೋಟೆಗೆ ಮುತ್ತಿಗೆ ಹಾಕಿದಾಗ ಗಜ್‌ಮ್ಯಾನನನ್ನು ಕುರಿತು—ನೀನು ಕೋಟೆಯನ್ನು ಬಿಟ್ಟುಕೊಡದಿದ್ದರೆ ನಿನ್ನ ಮಗನ ಕೊಲೆ ಮಾಡುವೆನು ಎಂದು ತಿಳುಹಿದನು. ಆದರೆ ಗಜ್‌ಮ್ಯಾನನು ಕೋಟೆಯ ಗೋಡೆಯ ಮೇಲಿಂದ ತನ್ನ ಮಗನನ್ನು ಕಣ್ತುಂಬ ನೋಡಿ ಕಣ್ಣೀರನ್ನು ತಡೆದುಕೊಂಡು ಜುಯಾನನನ್ನು ಕುರಿತು ತಿರಸ್ಕಾರ ಸೂಚಕ ಧ್ವನಿಯಿಂದ-ನನ್ನ ಮಗನು ದೇಶವನ್ನು ಕಾಪಾಡುವದಕ್ಕೆ ಹುಟ್ಟಿರುವನು; ಶತ್ರುಗಳ ಕೈಗೆ ದೇಶವನ್ನು ಕೊಡುವುದಕ್ಕೆ ಕಾರಣವಾಗ ನಮ್ಮ ವಂಶದಲ್ಲಿ ಯಾರೂ ಹುಟ್ಟಿಲ್ಲ. ವಿಶ್ವಾಸಘಾತುಕತನದಿಂದ ನೀನು ನನ್ನ ಮಗನನ್ನು ಕೊಲ್ಲುವೆಯಾದರೆ ಈ ಲೋಕದಲ್ಲಿ ಅತ್ಯಂತನಿಂದ್ಯವಾದ ಅಪಕೀರ್ತಿಗೂ, ಪರಲೋಕದಲ್ಲಿ ಅಸಹ್ಯವಾದ ಯಾತನೆಗೂ ಗುರಿಯಾಗುವೆ; ನನ್ನ ಮಗನು ಮಾತ್ರ ಈ ಲೋಕದಲ್ಲಿ ಅತ್ಯಂತ ಸಂಮಾನವನ್ನೂ ಪರಲೋಕದಲ್ಲಿ ಶ್ರೇಷ್ಠವಾದ ಸುಖವನ್ನೂ ಹೊಂದುವನು. ಹೀಗಿರುವಾಗ ಕೋಟೆಯನ್ನು ನಿನ್ನ ಸ್ವಾಧೀನಪಡಿಸುವುದು ಅಸಂಭವವೇ ಸರಿ; ಬೇಕಾಗಿದ್ದರೆ ನನ್ನ ಮಗನನ್ನು ಇರಿಯುವುದಕ್ಕೆ ಈ ಕಠಾರಿಯನ್ನು ತೆಗೆದುಕೊಳ್ಳು ಎಂದು ಹೇಳಿ

ಗಜ್‌ವ್ಯಾಸನು ಸೊಂಟದಲ್ಲಿದ್ದ ಕಠಾರಿಯನ್ನು ಜುಯಾಸನ ಕಡೆಗೆ ಚೆಲ್ಲಿ ಕೋಟೆಯ ಒಳಗೆ ಹೋದನು. ಸ್ವಲ್ಪ ವೇಳೆಯಲ್ಲಿ ಕೋಟೆಯ ಹೊರಗೆ ಒಂದು ದೊಡ್ಡ ದುಃಖದ ದನಿಯು ಹೊರಟುದು ಕೇಳಬಂದಿತು. ಸಿಟ್ಟಿನಿಂದ ಸಂತಪ್ತನಾದ ಜುಯಾಸನು ಗಜ್‌ವ್ಯಾಸನ ಮಗನನ್ನು ತನ್ನ ಸೈನ್ಯದಿದಿರಿಗೆ ಇರಿದು ಕೊಂದನು. ಈ ಆರ್ತಧ್ವನಿಯನ್ನು ಕೇಳಿ ಗಜ್‌ವ್ಯಾಸನು ಮನೆಯೊಳಗಿಂದ ಹೊರಗೆ ಬಂದು, ನಡೆದ ಸಂಗತಿಯನ್ನು ತಿಳಿದು—ಇಷ್ಟೇ ಅಲ್ಲವೇ ಆದುದು? ನಾನು ಶತ್ರುಗಳು ಕೋಟೆಯನ್ನೇರಿ ಬಂದರೋ ಎಂದು ಮಾಡಿದ್ದೆನು. ಎಂದು ನುಡಿದನು! ವೀರರಾದ ಮುಸಲ್ಮಾನ ಸೈನಿಕರು ಜುಯಾಸನ ಈ ಕೃತ್ಯಕ್ಕೆ ಹೇಸಿ ಇಂಥ ಭದ್ರವಾದ ಕೋಟೆಯನ್ನು ಈ ಅಲ್ಪಸೇನೆಯು ಈ ತರದ ಸೇನಾಪತಿಯ ಕೈಕೆಳಗೆ ವಶಪಡಿಸಿಕೊಳ್ಳಲಾರದು ಎಂದು ಹೇಳಿ ಹೊರಟು ಹೋದರು.

---

ತಂದೆಯ ಉಪದೇಶ.

## ೯೩. ಧನಸೆಟ್ಟಿಯೂ, ಅವನ ಮಕ್ಕಳೂ.

ಕೆಲವು ವರ್ಷಗಳ ಪೂರ್ವದಲ್ಲಿ ಬಂಕಾಪುರವೆಂಬ ಪಟ್ಟಣದಲ್ಲಿ ಧನಸೆಟ್ಟಿಯೆಂಬ ಸಾವುಕಾರನಿದ್ದನು. ಆತನಿಗೆ ಕಲ್ಲ, ಮಲ್ಲ ಎಂಬ ಇಬ್ಬರು ಮಕ್ಕಳಿದ್ದರು. ಧನಸೆಟ್ಟಿಯು ಮರಣಸಮಯದಲ್ಲಿ ಕಲ್ಲನನ್ನೂ ಮಲ್ಲನನ್ನೂ ಬಳಿಗೆ ಕರೆದು ಮಕ್ಕಳೇ, (೧) ರುಚಿಮಾಡಿಕೊಂಡು ಊಟಮಾಡಿರಿ, (೨) ಮೆತ್ತಗೆ ಮಾಡಿಕೊಂಡು ಮಲಗಿರಿ, (೩) ಕೊಟ್ಟ ಸಾಲವ ಕೇಳಬೇಡಿರಿ, (೪) ಊರಿಗೊಂದು ಮನೆಯ ಮಾಡಿರಿ; ಈ ಮಾತುಗಳನ್ನು ಪಾಲಿಸಿದರೆ ಮುಂದೆ ನೀವು ಚೆನ್ನಾಗಿ ಬಾಳುವಿರಿ ಎಂದು ಉಪದೇಶಿಸಿ ಮರಣಹೊಂದಿದನು.

ಧನಸೆಟ್ಟಿಯ ಮರಣದ ತರುವಾಯ ಕಲ್ಲಸೆಟ್ಟಿಯೂ, ಮಲ್ಲಸೆಟ್ಟಿಯೂ ತಂದೆಯ ವಿಪುಲವಾದ ಸಂಪತ್ತನ್ನು ಪಾಲುಮಾಡಿಕೊಂಡು ವ್ಯಾಪಾರಕ್ಕಾಗಿ ಬೇರೆ ಬೇರೆ ಕಡೆಗೆ ಹೋದರು. ಕಲ್ಲಸೆಟ್ಟಿ ತಂದೆಯ ಉಪದೇಶವನ್ನು ಪಾಲಿಸುವುದಕ್ಕಾಗಿ ದಿನಾಲು ತರತರದ ಪಕ್ವಾನ್ನಗಳನ್ನು ಮಾಡಿಸಿ ಉಣತೊಡಗಿದನು; ಹಂಸತೂಲಿಕಾತಲ್ಪಗಳ ಮೇಲೆ ಹೊರಳಾಡಹತ್ತಿದನು; ಕೊಟ್ಟಸಾಲವನ್ನು ಕೇಳದೆ ಹಣವನ್ನು ಮುಳುಗಿಸಿಕೊಂಡನು; ಊರಿಗೊಂದು ಮನೆಯ ಮಾಡಲೋಸುಗ ಹಲವು ಊರುಗಳಲ್ಲಿ ಸ್ಥಳಗಳನ್ನು ಕೊಂಡನು. ಈ ಕೆಲಸಗಳಲ್ಲಿ ಆತನ ಬಳಿಯಲ್ಲಿದ್ದ ಹಣವೆಲ್ಲ ತೀರಿಹೋಯಿತು.

ಮಲ್ಲಸೆಟ್ಟಿ ಮರುಳನಲ್ಲ. ಆತನು ತಂದೆಯ ಮಾತುಗಳಲ್ಲಿ ಏನಾದರೂ ಗೂಢಾರ್ಥವಿರಬೇಕೆಂದು ಆಲೋಚಿಸತೊಡಗಿದನು. ಒಂದು ದಿವಸ ಸಾಯಂಕಾಲ ಈ ಆಲೋಚನೆಯಲ್ಲಿ ಬಹಳ ಹೊತ್ತು ಕಳೆದು ದಿನದ ಊಟದ ವೇಳೆಯನ್ನು ಮೀರಿ ಅಂಗಡಿಯಿಂದ ಮನೆಗೆ ಬಂದನು. ಆ ದಿವಸ ಚೆನ್ನಾಗಿ ಹಸಿವೆಯಾದುದರಿಂದ ಆರಿಹೋದ ಅಡಿಗೆ ಕೂಡ ಅವನಿಗೆ ರುಚಿಯೆನಿಸಿತು. ಆಗ ಅವನು ತಂದೆಯ ಮೊದಲಿನ ಮಾತಿಗೆ 'ಚೆನ್ನಾಗಿ ಹಸಿವೆಯಾದ ಬಳಿಕ ಉಣ್ಣು' ಎಂದು ಅರ್ಥವಿರಬೇಕೆಂದು ತಿಳಿದುಕೊಂಡನು. ಆ ದಿವಸ ರಾತ್ರಿ ದಿನದ ಮಲಗುವ ವೇಳೆಯೂ ಮೀರಿದುದರಿಂದ ಸಾಧಾರಣವಾದ ಹಾಸಿಗೆಯ ಮೇಲೂ ಚೆನ್ನಾಗಿ ನಿದ್ದೆ ಬಂದಿತು. ಅದರಿಂದ ಅವನು ತಂದೆಯ ಎರಡನೆಯ ಮಾತಿಗೆ 'ನಿದ್ರೆಬಾರದೆ ಮಲಗಬೇಡ' ಎಂಬ ಅರ್ಥವುಂಟೆಂದು ತಿಳಿದನು. ಬಳಿಕ ಒಂದು ದಿವಸ ಬೆಳಗ್ಗೆ ಚಿನ್ನದ ಬಳೆಯನ್ನು ಒತ್ತೆಯಿಟ್ಟು ಹಣವನ್ನೊಯ್ದ ಸಾಲಗಾರನೊಬ್ಬನು ಸಾಲದ ಹಣವನ್ನೂ ಬಡ್ಡಿಯನ್ನೂ ತಂದು ಇದಿರಿಗಿಟ್ಟು ತನ್ನ ಬಳೆಯನ್ನು ಕೇಳಿದನು. ಸಾಲದ ಹಣವು ತಾನಾಗಿ ಬಂದುದನ್ನು ನೋಡಿ ಮಲ್ಲಸೆಟ್ಟಿಯು ತಂದೆಯ ಮೂರನೆಯ ಮಾತಿಗೆ ಒತ್ತೆಯಿಲ್ಲದೆ ಸಾಲ ಕೊಡಬೇಡವೆಂಬ ಅರ್ಥವುಂಟೆಂದು ತಿಳಿದುಕೊಂಡನು. ಮತ್ತೊಂದು ದಿವಸ ಮಲ್ಲಸೆಟ್ಟಿಯು ನೆರೆಯೂರಿಗೆ ಹೋದಾಗ ತಂದೆಯ ಋಣಾನುಬಂಧದವರ ಮನೆಯಲ್ಲಿಳಿದಿದ್ದನು. ಮಾತಿಗೆ ಮಾತು ನಡೆದಾಗ ಮಲ್ಲಸೆಟ್ಟಿಯು—ಈ ಊರಲ್ಲಿ ಮನೆಕಟ್ಟಿಸುವುದಕ್ಕೆ ನಮಗೊಂದು ಸ್ಥಳವನ್ನು ಕೊಡಿಸಿರೆಂದು ಕೇಳಿದನು. ಆಗ ಆ ಮನೆಯ ಗೃಹಸ್ಥನು—ನಾವು ಈ ಊರಲ್ಲಿರುವ ವರೆಗೆ ನಿಮಗೆ ಬೇರೆ ಮನೆ ಏತಕ್ಕೆ? ಈ ಮನೆ ನಿಮ್ಮದೇ ಅಲ್ಲವೇ ಎಂದು ಕೇಳಿದನು. ಆಗ ಮಲ್ಲಸೆಟ್ಟಿಯು ತಂದೆಯ ನಾಲ್ಕನೆಯ ಮಾತಿಗೆ ಊರಿಗೊಂದು ಋಣಾನುಬಂಧದ ಮನೆಯನ್ನು ಮಾಡಬೇಕೆಂಬ ಅರ್ಥವೆಂದು ತಿಳಿದುಕೊಂಡನು.

ತಂದೆಯ ಉಪದೇಶದ ಗುಟ್ಟನ್ನು ತಿಳಿದುಕೊಂಡ ಮಲ್ಲಸೆಟ್ಟಿಯು ಕೆಲವು ದಿವಸಗಳಲ್ಲಿ ಸ್ಥಿತಿವಂತನಾದನು. ಮತ್ತು ಅಣ್ಣನು ತಂದೆಯ ಮಾತಿನ ಅರ್ಥವನ್ನು ತಿಳಿಯದೆ ಅಡ್ಡದಾರಿಯ ಹಿಡಿದುದನ್ನು ಕೇಳಿ ಆತನ ಬಳಿಗೆ ಹೋಗಿ ತಂದೆಯ ಉಪದೇಶದ ಅರ್ಥವನ್ನು ತಿಳುಹಿ ಆತನನ್ನು ದಾರಿಗೆ ತಂದನು.

---

ಆತ್ಮಾರ್ಪಣ.

## ೯೬. ಕ್ಯಾಲೇಪಟ್ಟಣದ ನಾಗರಿಕರು.

ಇಂಗ್ಲಂಡದ ಅರಸನಾದ ೩ನೆಯ ಎಡ್ವರ್ಡನು ಫ್ರಾನ್ಸವನ್ನು ಆಕ್ರಮಿಸಲೋಸುಗ ಆ ದೇಶಕ್ಕೆ ದಂಡೆತ್ತಿ ಹೋಗಿ ಕ್ರೇಸಿಪಟ್ಟಣದ ಯುದ್ಧದಲ್ಲಿ ಜಯಹೊಂದಿ ಕೂಡಲೆ ಕ್ಯಾಲೇಕೋಟೆಯನ್ನು ಮುತ್ತಿದನು. ಆ ಮುತ್ತಿಗೆ ಒಂದು ವರ್ಷಕ್ಕಿಂತ ಹೆಚ್ಚು ಕಾಲ ಸಾಗಿದುದರಿಂದ ಕೋಟೆಯೊಳಗಿನ ಜನರಿಗೆ ಅನ್ನವಿಲ್ಲದಂತಾಗಲು ಅವರು ಕೋಟೆಯನ್ನು ಎಡ್ವರ್ಡ ರಾಜನಿಗೆ ಒಪ್ಪಿಸಿಬಿಡಬೇಕಾಯಿತು. ಈ ಪಟ್ಟಣದ ಮುತ್ತಿಗೆಯಲ್ಲಿ ಆದ ಅರ್ಥಹಾನಿ, ಪ್ರಾಣಹಾನಿ ಇವುಗಳಿಂದ ರೇಗಿದ ಎಡ್ವರ್ಡನು ಕೋಟೆಯನ್ನು ಒಪ್ಪಿಸುವುದಕ್ಕೆ ಬಂದ ಕ್ಯಾಲೇಪಟ್ಟಣಿಗರನ್ನು ಕುರಿತು—ನೀವೆಲ್ಲರು-ಸೈನಿಕರು, ನಗರವಾಸಿಗಳಾದ ಹೆಂಗುಸರು, ಹುಡುಗರು—ನನ್ನ ಸೆರೆಯಾಳುಗಳಾಗಬೇಕು, ನಾನು ಎಲ್ಲರನ್ನೂ ಕೊಂದುಬಿಡಬಹುದು, ಇಲ್ಲವೆ ದಾಸರನ್ನು ಮಾಡಿ ಮಾರಿಬಿಡಬಹುದು ಎಂದು ಹೇಳಿದನು. ಈ ಮಾತಿಗೆ ಅವರು ಅಂಜಿ ಮತ್ತೆ ಕೆಲವು ದಿವಸ ಕೋಟೆಯನ್ನು ಸಂರಕ್ಷಿಸಿಕೊಂಡರು. ಕೊನೆಗೆ ಎಡ್ವರ್ಡನು—ನಿಮ್ಮೊಳಗಿನ ಮುಖ್ಯರಾದ ಆರು ಜನ ನಾಗರಿಕರು ಕೊರಳಿಗೆ ಸರಪಳಿಯನ್ನು ಕಟ್ಟಿಕೊಂಡು ಬಂದು ಕೋಟೆಯ ಅಗಸೆಯ ಬೀಗದ ಕೈಯನ್ನು ನನ್ನ ಸ್ವಾಧೀನಪಡಿಸಿದರೆ ನಾನು ಆ ಆರು ಜನರನ್ನು ಮಾತ್ರ ಕೊಂದು ನನ್ನ ಸಿಟ್ಟನ್ನು ತೀರಿಸಿಕೊಳ್ಳುವೆನು, ಉಳಿದವರನ್ನು ಊರಬಿಟ್ಟು ಹೋಗಗೊಡುವೆನು ಎಂದು ಹೇಳಿ ಕಳುಹಿದನು. ಈ ಸಂದರ್ಭದಲ್ಲಿ ಯುಜುಸ್ಟೇಸ್ ಸೆಂಟಪಿಯರ ಮೊದಲಾದ ಆರು ಜನರು ದೇಶಕ್ಕೋಸ್ಕರ ಪ್ರಾಣದಾನ ಮಾಡುವುದಕ್ಕೆ ಮುಂದುವರಿದು ಬಂದರು. ಈ ಜನರು ಶ್ರೀಮಂತರಾದ ಸದ್ಗೃಹಸ್ಥರು. ಮೊದಲು ಸೆಂಟಪಿಯರನು ಹೇಳಿದುದೇನಂದರೆ—ಕೋಟೆಯೊಳಗಿನ ಜನರೆಲ್ಲ ಅನ್ನವಿಲ್ಲದೆ, ಇಲ್ಲವೆ ಕೊಲ್ಲಿಸಿಕೊಂಡು ಸಾಯುವುದಕ್ಕಿಂತ ಆರೇ ಜನರು ಸಾಯುವುದು ಉತ್ತಮವು. ಆ ಆರು ಜನರಲ್ಲಿ ನಾನು ಮೊದಲಿಗನಾಗುವೆನು, ಪರಲೋಕದಲ್ಲಿ ದೇವರು ಅವಶ್ಯವಾಗಿ ದಯೆದೋರುವನು. ಈ ಆರು ಜನರು ಪಟ್ಟಣಿಗರೆಲ್ಲ ಮರಮರ ಮರುಗುತ್ತಿರಲು ಎಡ್ವರ್ಡನ ಪಾಳಯಕ್ಕೆ ಹೋದರು. ಆತನು, ಯಾರು ಏನು ಹೇಳಿದರೂ ಕೇಳದೆ ಅವರನ್ನು ಕೊಲ್ಲಲಪ್ಪಣೆಕೊಟ್ಟನು. ಕೊನೆಗೆ ಎಡ್ವರ್ಡನ ರಾಣಿಯೂ ಇವರಿಗೆ ಜೀವದಾನ

ಮಾಡಬೇಕೆಂದು ಬಹಳವಾಗಿ ಬೇಡಿಕೊಂಡಳು. ಆಕೆ ಸ್ವಲ್ಪ ದಿವಸಗಳ ಮುಂಚೆ ಸ್ಕಾಟ್ಲಂಡದ ಅರಸನನ್ನು ಸೋಲಿಸಿ ಇಂಗ್ಲಂಡಕ್ಕೆ ಆತನಿಂದ ಉಪದ್ರವವಾಗದಂತೆ ಉಪಕಾರ ಮಾಡಿದ್ದಳು. ರಾಣಿಯ ಪ್ರಾರ್ಥನೆಯ ಮೇರೆಗೆ ಎಡ್ವರ್ಡನು ಅವರನ್ನು ಬಿಡಬೇಕಾಯಿತು. ರಾಣಿಯು ಆ ಆರು ಜನರ ಮಹಾನುಭಾವತೆಯನ್ನು ಮನಸ್ಸಿನಲ್ಲಿ ತಂದು ತಕ್ಕ ಮನ್ನಣೆಮಾಡಿ ಕಳುಹಿಕೊಟ್ಟಳು.

---

ಸರ್ವಸ್ವದಾನ.

## ೯೭. ಶಿರಸಂಗಿ ಅಪ್ಪಾಸಾಹೇಬ.

ಬೆಳಗಾಂವ ಜಿಲ್ಲೆಯಲ್ಲಿ ಶಿರಸಂಗಿ ಎಂಬುದೊಂದು ಚಿಕ್ಕ ಸಂಸ್ಥಾನವುಂಟು. ಅಲ್ಲಿಯ ಸಂಸ್ಥಾನಿಕರಾದ ಜಾಯಪ್ಪದೇಸಾಯಿ ಎಂಬವರು ಬಹಳ ಪ್ರಸಿದ್ಧರಾಗಿ ಹೋದರು. ಅವರ ದತ್ತಕಪುತ್ರರಾದ ಅಪ್ಪಾಸಾಹೇಬ ಎಂಬವರೂ ವಿದ್ಯಾಪಕ್ಷಪಾತಿಗಳಾಗಿ ಸಂಸ್ಥಾನವನ್ನು ಚೆನ್ನಾಗಿ ನಡೆಸಿಕೊಂಡು ಬಂದರು; ಇವರಿಗೂ ಔರಸ ಪುತ್ರರು ಆಗಲಿಲ್ಲ. ಆಗ ಇವರು ಆಲೋಚಿಸಿದುದೇನೆಂದರೆ—'ಈ ಸಂಸ್ಥಾನಿಕರ ವಂಶದವನಲ್ಲದ ನಾನು ದತ್ತಕಪುತ್ರನಾಗಿ ಬಂದು ಶ್ರೀಮಂತಿಕೆಯನ್ನನುಭೋಗಿಸಿದೆನು; ನಾನು ಇನ್ನೊಬ್ಬನನ್ನು ದತ್ತಕಮಾಡಿಕೊಂಡರೆ ಅವನೂ ಒಬ್ಬನು ನನ್ನಂತೆ ಶ್ರೀಮಂತಿಕೆಯನ್ನು ಅನುಭೋಗಿಸುವನು. ಇದರಲ್ಲೇನು ಅರ್ಥವಿದೆ? ಇದು ಕರ್ನಾಟಕದೊಳಗಿನ ಒಂದು ಸಂಸ್ಥಾನವು, ಕರ್ನಾಟಕದೊಳಗಿನ ಎಲ್ಲ ನನ್ನ ಜಾತಿಬಾಂಧವರ ಮಕ್ಕಳು ಈ ಸಂಸ್ಥಾನದಿಂದ ಉಪಕಾರವನ್ನು ಹೊಂದಲಿ, ಒಬ್ಬ ದತ್ತಕ ಮಗನೇಕೆ? ವಿದ್ಯಾದಾನಕ್ಕೆ ಸಹಾಯ ಮಾಡಿ ನನ್ನ ಎಲ್ಲ ಜಾತಿಬಾಂಧವರ ಮಕ್ಕಳನ್ನು ನನ್ನ ಮಕ್ಕಳನ್ನಾಗಿ ಮಾಡಿಕೊಳ್ಳುವೆನು.' ಕೊನೆಗೆ ಈ ಆಲೋಚನೆಯನ್ನೇ ನೆರವೇರಿಸಬೇಕೆಂದು ನಿರ್ಣಯಿಸಿ ಈ ಮಹಾಪುರುಷನು ತನ್ನ ಇಡೀ ಸಂಸ್ಥಾನವನ್ನು ತನ್ನ ಜಾತಿಬಾಂಧವರ ಮಕ್ಕಳ ವಿದ್ಯಾರ್ಜನೆಯ ಸಹಾಯಕ್ಕೆಂದು ದಾನಮಾಡಿಬಿಟ್ಟನು. ಅಪ್ಪಾಸಾಹೇಬರು ಈ ಸರ್ವಸ್ವದಾನದಿಂದ, ಈಚೆಗೆ ವಿದ್ಯೆಯಲ್ಲಿ ಹಿಂದೆ ಉಳಿಯುತ್ತ ಬಂದ ಕರ್ನಾಟಕಕ್ಕೆ ಮತ್ತೆ ತನ್ನ ಗೌರವವನ್ನು ಹೊಂದುವ ಅನುಕೂಲತೆಯನ್ನು ಮಾಡಿಕೊಟ್ಟು ಅದನ್ನು ಚಿರಋಣಿಯಾಗಿ ಮಾಡಿಕೊಂಡರು.

---

ಮಾದರಿಯ ದೇಶಭಕ್ತಿ.

## ೯೮. ಮ್ಯಾನ್‌ಲಿಯಸ್ ಟರ್ಕೋಟೀಯಾಟಸ್.

ಮ್ಯಾನ್‌ಲಿಯಸ್ ಟರ್ಕೋಟೀಯಾಟಸನು ರೋಮದ ಮುಖ್ಯ ಕನ್ಸಲನಾಗಿದ್ದನು. ಲ್ಯಾಟಿನ್ ಜನರೊಡನೆ ಯುದ್ಧವು ನಡೆದಾಗ ಎರಡನೆಯ ಕನ್ಸಲನಾದ ಡಿಸಿಯಸನೊಡನೆ ಕೆಲವು ಸೈನಿಕರು ಸೇರಿ ಒಕ್ಕಟ್ಟುಮಾಡಿಕೊಂಡು ಮುಖ್ಯಕನ್ಸಲನ ಅನುಮತಿಯಿಲ್ಲದೆ ಯಾರೂ ಗುಂಪು ಬಿಟ್ಟು ಒಂಟಿಗನಾಗಿ ಯುದ್ಧಕ್ಕೆ ಮುಂದುವರಿದು ಹೋಗಬಾರದೆಂದೂ ಹೋದರೆ ಮರಣಶಿಕ್ಷೆ ವಿಧಿಸಲ್ಪಡಬೇಕೆಂದೂ ಕಟ್ಟು ಮಾಡಿಕೊಂಡರು. ಲ್ಯಾಟಿನ್ ಸೇನೆಯು ದೊಡ್ಡದಿದ್ದುದರಿಂದ ರೋಮನ್ನರು ಈ ಮೇರೆಗೆ ಒಕ್ಕಟ್ಟಿನಿಂದ ಯುದ್ಧಮಾಡುವುದು ಅವಶ್ಯವಾಗಿತ್ತು.

ಈ ಸಂಕೇತವಾದ ಬಳಿಕ ಒಬ್ಬ ಲ್ಯಾಟಿನ್ ಸೈನಿಕನು ಕನ್ಸಲ್ ಮ್ಯಾನ್‌ಲಿಯಸನ ಮಗನನ್ನು ಹೆಸರುಗೊಂಡು ಯುದ್ಧಕ್ಕೆ ಕರೆದನು. ಆದರೆ ಆತನು ಯುದ್ಧಕ್ಕೆ ಬಾರದಿರುವುದನ್ನು ಕಂಡು ರೋಮನ್ನರು ಹೇಡಿಗಳೆಂದು ಹಳಿದನು. ಆಗ ಕನ್ಸಲನ ಮಗನು ತನ್ನ ಜನಾಂಗದ ಅಪಮಾನಗೊಳಿಸುವ ಶಬ್ದಗಳನ್ನು ಕೇಳಿ ಸೈರಿಸಲಾರದೆ ಗುಂಪನ್ನು ಬಿಟ್ಟು ಒಬ್ಬನೇ ಯುದ್ಧಕ್ಕೆ ನಡೆದನು; ಹೀಗೆ ಹೋದರೆ ತನಗೆ ಮರಣಶಿಕ್ಷೆಯಾಗುವುದೆಂದು ಆತನು ತಿಳಿದಿದ್ದನು. ಆದರೂ ಆವೇಶದಿಂದ ಮುಂದುವರಿದು ಹೋಗಿ ತನ್ನನ್ನು ಯುದ್ಧಕ್ಕೆ ಕರೆದ ಸೈನಿಕನನ್ನು ಸೋಲಿಸಿ ಆತನ ಶಸ್ತ್ರಾಸ್ತ್ರಗಳನ್ನು ಜಯಚಿಹ್ನಗಳೆಂದು ತೆಗೆದುಕೊಂಡು ಬಂದು ತಂದೆಯ ಇದಿರಿಗೆ ಇಟ್ಟನು. ರೋಮನ್ ಸೈನಿಕರೆಲ್ಲರೂ ಆನಂದದಿಂದ ಜಯಜಯಕಾರವನ್ನು ಮಾಡಿದರು. ಆಗ ಮ್ಯಾನ್‌ಲಿಯಸನು ಕಣ್ಣೀರು ತಂದು ಎಲ್ಲ ಸೈನ್ಯದ ಇದಿರಿಗೆ—ಎಲೈ ಮಗನೇ, ನಿನ್ನ ಜಯಲಾಭವನ್ನು ಕಂಡು ಸಂತೋಷಬಟ್ಟೆನು. ಅದಕ್ಕೋಸ್ಕರ ನಿನಗೆ ತಕ್ಕ ಸಮ್ಮಾನವನ್ನೂ ಮಾಡುವೆನು; ಆದರೆ ಸೈನ್ಯನಿಯಮಗಳನ್ನು ಪಾಲಿಸುವುದೇ ರೋಮದ ರಕ್ಷಣೆಯ ಉಪಾಯವಾಗಿರುವುದು. ನೀನು ಸೇನಾಪತಿಯ ನಿಯಮಕ್ಕೆ ವಿರುದ್ಧವಾಗಿ ನಡೆಯುವ ಪೂರ್ವದಲ್ಲಿ ಆತನ ಒಪ್ಪಿಗೆಯನ್ನು ಪಡೆಯಲಿಲ್ಲ. ನಾನು ನಿನಗೆ ಈಗ ಶಿಕ್ಷಿಸುವುದನ್ನು ಬಿಟ್ಟು ಸೈನ್ಯ ನಿಯಮಗಳ ಶಿಥಿಲತೆಯನ್ನುಂಟುಮಾಡಿ ರೋಮದ ಚಿರಕಾಲದ ಹಾನಿಯನ್ನು ಮಾಡಲೋ ಇಲ್ಲವೆ ದೇಶದ ಕಲ್ಯಾಣಕ್ಕಾಗಿ ನನ್ನ ಒಬ್ಬನೇ ಒಬ್ಬ ಶೂರಪುತ್ರ

ನಾದ ನಿನಗೆ ಮರಣಶಿಕ್ಷೆಯನ್ನು ವಿಧಿಸಲೋ ನೀನೇ ಹೇಳು ಎಂದು ಕೇಳಿದನು. ಮತ್ತು ಜಯಚಿಹ್ನಗಳನ್ನು ಧರಿಸಿದ ಪ್ರಿಯತಮನಾದ ತನ್ನ ಮಗನಿಗೆ ಆ ನಿಷ್ಪಕ್ಷಪಾತಿಯಾದ ಕನ್ಸಲನು ಮರಣಶಿಕ್ಷೆಯನ್ನು ವಿಧಿಸಿದನು.

ಪೂರ್ವಕಾಲದಲ್ಲಿ ಹಂಸಧ್ವಜನೆಂಬ ಅರಸನು ಅರ್ಜುನನೊಡನೆ ಯುದ್ಧ ಮಾಡಬೇಕಾದ ಸಮಯದಲ್ಲಿ ಯುದ್ಧದ ಕಟ್ಟಳೆಯನ್ನು ಮೀರಿ ತಡಮಾಡಿ ಕಾಳಗಕ್ಕೆ ಬಂದ ತನ್ನ ಪ್ರಿಯಪುತ್ರನಾದ ಸುಧನ್ವನನ್ನು ಧರ್ಮಾಧಿಕಾರಿಯ ಅಪ್ಪಣೆಯಿಂದ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿದನು.

ಕನ್ಸಲನ ಅಪ್ಪಣೆಯಾದ ಕೂಡಲೆ ಆ ವೀರಪುತ್ರನು ತಂದೆಯ ಚರಣಕ್ಕೆರಗಿ ಸಂತೋಷದಿಂದ ಮರಣಶಿಕ್ಷೆಯನ್ನು ಹೊಂದಿದನು.

ಈ ಕಾಲದಲ್ಲಿ ಇಟಲಿಯ ಜನರಲ್ಲಿ—ಯಾವುದೊಂದು ದುಃಸಾಧ್ಯವಾದ ಕೆಲಸವು ಬಂದಾಗ ಮುಖ್ಯಮನುಷ್ಯನು ದೇವರ ಅನುಗ್ರಹವನ್ನು ಸಂಪಾದಿಸುವುದಕ್ಕೋಸ್ಕರ ತನ್ನ ಜೀವವನ್ನು ದೇವರಿಗೆ ಅರ್ಪಿಸಿದರೆ ಮಾತ್ರ ಆ ಕೆಲಸವು ನಿಶ್ಚಯವಾಗಿ ಸಾಧ್ಯವಾಗುವುದೆಂದು ಅವರ ನಂಬಿಕೆಯಿತ್ತು. ಮ್ಯಾನ್ಲಿಯಸನು ಈ ಯುದ್ಧದಲ್ಲಿ ತಾನು ಆ ಮೇರೆಗೆ ಜೀವವನ್ನು ಅರ್ಪಿಸುವೆನೆಂದು ಎರಡನೆಯ ಕನ್ಸಲನಿಗೆ ಹೇಳಿಟ್ಟಿದ್ದನು. ಪುತ್ರಶೋಕದಿಂದ ಆತನು ಜೀವದ ಹಂಗು ಇಲ್ಲದವನಾಗಿದ್ದನು. ಆದುದರಿಂದ ಆತನು ಯುದ್ಧದಲ್ಲಿ ಜೀವಭಯವಿರುವ ಸ್ಥಳಗಳಲ್ಲಿ ನಿರ್ಭಯದಿಂದ ಮುಂದುವರಿದು ಹೋಗುತ್ತಿದ್ದನು. ಅದರಿಂದ ಅವನ ಸೈನಿಕರೂ ಉತ್ಸಾಹದಿಂದ ಕಾದತೊಡಗಿದರು. ಆದುದರಿಂದ ಇವನು ಯುದ್ಧಮಾಡುವ ಕಡೆಗಳಲ್ಲೆಲ್ಲ ಈತನೇ ಜಯಶೀಲನಾಗುತ್ತ ಬಂದನು. ಆದರೆ ಎರಡನೆಯ ಕನ್ಸಲನು ಯುದ್ಧಮಾಡುತ್ತಿರುವ ಕಡೆಯಲ್ಲಿ ರೋಮನ್ನರು ಸೋಲುತ್ತ ನಡೆದಿದ್ದರು. ಆಗ ಎರಡನೆಯ ಕನ್ಸಲನಾದ ಡಿಸಿಯಸನು ಶಸ್ತ್ರತ್ಯಾಗಮಾಡಿ ತನ್ನ ಜೀವವನ್ನು ವಿಧಿಯಿಂದ ದೇವರಿಗೆ ಸಮರ್ಪಣಮಾಡಿ ಬಿಳಿಯ ವಸ್ತ್ರಗಳನ್ನು ಧರಿಸಿ ಕುದುರೆಯ ಮೇಲೆ ಕುಳಿತು ಶತ್ರುಸೈನ್ಯದ ಮೇಲೆ ನಡೆದನು. ಲ್ಯಾಟಿನ್ನರು ಆತನನ್ನು ನುಚ್ಚುನುರಿಯಾಗಿ ಕಡಿದರು. ಆಗ ಸಂತಾಪಗೊಂಡು ರೋಮನ್ನರು ಲ್ಯಾಟಿನ್ನರನ್ನು ಸಂಹರಿಸತೊಡಗಿದರು. ಮ್ಯಾನ್ಲಿಯಸನು ತನ್ನ ಜೀವವನ್ನು ವಿಧಿಪೂರ್ವಕವಾಗಿ ಅರ್ಪಣಮಾಡಬೇಕೆಂದಿದ್ದ ಹೊತ್ತಿಗೆ ಡಿಸಿಯಸನ ಈ ವರ್ತಮಾನವನ್ನು

ಕೇಳಿದನು. ಆಗಲಾ ಸ್ವದೇಶಭಕ್ತನು ಪುತ್ರಶೋಕವನ್ನು ಒಳಗೆ ನುಂಗಿ ಕೊಂಡು ಎರಡೂ ದಂಡುಗಳ ದಳವಾಯಿಯಾಗಿ ಬಲು ಹುರುಪಿನಿಂದ ಯುದ್ಧವನ್ನು ಸಾಗಿಸಿ ಲ್ಯಾಟಿನ್ನರನ್ನು ಮುರಿಬಡಿದು ಸಂಪೂರ್ಣವಾದ ಗೆಲು ವನ್ನು ಸಂಪಾದಿಸಿ ರೋಮಕ್ಕೆ ಲ್ಯಾಟಿನ್ನರ ಭಯವು ಇಲ್ಲದಂತೆ ಮಾಡಿದನು.

---

ಕರ್ತವ್ಯನಿಷ್ಠೆ.

## ೯೯. ಡಾಕ್ಟರ್ ಹೇ.

ಸಿಪಾಯಿಗಳ ಬಂಡಾಯದ ಕಾಲದಲ್ಲಿ ಕಾಶಿಯಿಂದ ಎಲ್ಲ ಯುರೋಪಿ ಯನ್ನರು ಓಡಿಹೋಗುತ್ತಿರುವ ಕಾಲದಲ್ಲಿ ಅಲ್ಲಿಯ ಸಿವ್ಹಿಲ್ ಹಾಸ್ಪಿಟಲಿನಲ್ಲಿ ಕೆಲಸಮಾಡುತ್ತಿದ್ದ ಡಾಕ್ಟರ್ ಹೇ ಎಂಬವರು ಉಳಿದ ಯುರೋಪಿಯನ್ನ ರೊಡನೆ ಓಡಿಹೋಗುವುದಕ್ಕೆ ಒಪ್ಪಲಿಲ್ಲ. ಯಾವ ರೆಜಿಮೆಂಟಿನ ಸಿಪಾಯಿ ಗಳು ಬಂಡಾಯ ಹೂಡಿ ಯುರೋಪಿಯನರ ಕೊಲೆಮಾಡುತ್ತ ತಿರುಗಾಡು ತ್ತಿದ್ದರೋ ಅದೇ ರೆಜಿಮೆಂಟಿನೊಳಗಿನ ಸಿಪಾಯಿಗಳಲ್ಲಿ ಹಲವರು ಅವರ ಹಾಸ್ಪಿಟಲಿನಲ್ಲಿ ಮಲಗಿದ್ದರು. ಅವರನ್ನು ಕೂಡ ಡಾಕ್ಟರ್ ಹೇ ಸಾಹೇಬರು ಒಳ್ಳೆಯ ರೀತಿಯಿಂದ ಉಪಚರಿಸುತ್ತಿದ್ದರು. ಆದರೆ ಆ ಬಂಡಾಯದ ಕಾಲ ದಲ್ಲಿ ಡಾ. ಹೇ. ಸಾಹೇಬರ ಕೊಲೆಯಾಯಿತೆಂಬುದು ಬಹಳ ಶೋಚನೀಯ ವಾಗಿರುವುದು.

---

ಅತಿಥಿಸತ್ಕಾರ.

## ೧೦೦. ಮಹಾತ್ಮನಾದ ಮಾರುಫ.

ಒಂದಾನೊಂದು ದಿವಸ ಸಾಯಂಕಾಲಕ್ಕೆ ಒಬ್ಬ ಅಪರಿಚಿತನಾದ ಅತಿ ಥಿಯು ಮಹಾತ್ಮನಾದ ಮಾರುಫನ ಮನೆಗೆ ಬಂದು ಇಳಿದುಕೊಂಡನು. ಬಂದ ದಿವಸವೇ ಆ ಅತಿಥಿಯು ಬೇನೆ ಬಂದು ಮಲಗಿಕೊಳ್ಳಲು, ಮಾರು ಫನು ಆತನ ಶುಶ್ರೂಷೆಯನ್ನು ಚೆನ್ನಾಗಿ ಮಾಡುತ್ತ ಇದ್ದನು. ಆ ರೋಗಿಯ ನರಳುವಿಕೆ, ಒದರುವಿಕೆ, ಹಲವು ತರದ ಸೇವೆ ಇವುಗಳಲ್ಲಿ ಎರಡು ದಿವಸ ಮನೆಯವರಿಗೆಲ್ಲ ವಿಶ್ರಾಂತಿಯೂ ನಿದ್ರೆಯೂ ಇಲ್ಲದಂತಾಗಿತ್ತು. ಮೂರ ನೆಯ ದಿವಸ ರೋಗಿಗೆ ಸ್ವಲ್ಪ ಗುಣವಾದುದನ್ನು ಕಂಡು ಆ ದಿವಸ ರಾತ್ರಿ ಮಾರುಫನು ಮಲಗಿದ್ದನು. ಕೂಡಲೆ ರೋಗಿಯ ನರಳುವಿಕೆಯೂ ಒದ ರಾಟವೂ ಆರಂಭವಾದುದರಿಂದ ಮಾರುಫನು ಎಚ್ಚತ್ತನು. ರೋಗಿಯು ಆಗ—ಅಯ್ಯೋ ದೇವರೇ! ನನ್ನನ್ನು ಎಂಥವರ ಮನೆಯಲ್ಲಿ ತಂದು ಬಿಟ್ಟೆ!

ಇಲ್ಲಿ ಬೇನೆಯುವರನ್ನು ನೋಡುವವರೇ ಇಲ್ಲವಲ್ಲ? ಎಂದು ಅನ್ನುತ್ತಿದ್ದನು. ಈ ಮಾತನ್ನು ಮಾರುಫನ ಹೆಂಡತಿ ಕೇಳಿ ತನ್ನ ಪತಿಯನ್ನು ಕುರಿತು-ಇನ್ನು ಈ ಕೃತಘ್ನ ಮನುಷ್ಯನ ಸೇವೆಯಲ್ಲಿ ದಣಿಯ ಬೇಡಿರಿ; ಇನ್ನೆಲ್ಲಿ ಇದಕ್ಕೂ ಹೆಚ್ಚಿಗೆ ಪರಾಮರಿಕೆಯಾಗುವುದೋ ಅಲ್ಲಿಗೇ ಈತನು ಹೋಗಿ ಸಾಯಲಿ ಎಂದು ಹೇಳಿದಳು. ಆಗ ಮಾರುಫನು ನಕ್ಕು—ಬೇನೆಯ ಬಳಲಿಕೆಯಿಂದ ಆ ಮನುಷ್ಯನು ಏನಾದರೂ ಬಡಬಡಿಸುತ್ತಿದ್ದರೆ ನೀನೂ ಬಡಬಡಿಸಬೇಕೇ? ಯಾವನ ಪ್ರೀತಿಯಾಗಬೇಕೆಂದು ನಾವಿಬ್ಬರೂ ಈ ಅತಿಥಿಯ ಶುಶ್ರೂಷೆಯನ್ನು ಕೈಕೊಂಡಿರುವೆವೋ ಆತನೇನು ನಮ್ಮ ಮೇಲೆ ಸಿಟ್ಟಾಗಿಲ್ಲವಷ್ಟೇ? ಆತನು ನಮ್ಮ ಶರೀರಗಳನ್ನು ಬೇನೆಯಿಲ್ಲದಂತೆ ಇಟ್ಟು ತನ್ನ ಅಪಾರವಾದ ಕೃಪೆಯನ್ನು ನಮ್ಮ ಮೇಲೆ ತೋರ್ಪಡಿಸಿರುತ್ತಾನೆ. ಆರೋಗ್ಯದಲ್ಲಿದ್ದವರು ರೋಗಿಗಳ ಶುಶ್ರೂಷೆಯನ್ನು ಮಾಡುವುದು ಅವಶ್ಯವಲ್ಲವೇ? ಎಂದು ಕೇಳಿದನು. ಆ ಸಾಧ್ವಿಯ ಮನಸ್ಸು ನಿರ್ಮಲವಾಯಿತು, ತಾನೇ ಆ ರೋಗಿಯ ಶುಶ್ರೂಷೆಗೆ ಮುಂದುವರಿದು ನಡೆದಳು. ಎಲ್ಲ ರೀತಿಯಿಂದ ಉಪಚಾರ ಮಾಡಿ ಪೂರ್ಣಗುಣವಾದ ಬಳಿಕ ಅವರು ಆ ಅತಿಥಿಗೆ ತನ್ನ ಸ್ಥಳಕ್ಕೆ ಹೋಗಲು ಒಪ್ಪಿಗೆಯನ್ನು ಕೊಟ್ಟರು.

---

ಸೇವಕಧರ್ಮ.

## ೧೦೧. ಆಇಯಾಜ್

ಗಿಜನಿಯ ಸುಲ್ತಾನ ಮಹಮೂದನು ತನ್ನ ಒಬ್ಬ ಬಡಕುರೂಪಿ ಸೇವಕನ ಮೇಲೆ ಬಹಳ ಪ್ರೀತಿಮಾಡುತ್ತಿದ್ದನು. ಸುಲ್ತಾನನು ಅವನ ಮೇಲೆ ಅಷ್ಟೊಂದು ಪ್ರೀತಿಮಾಡುವುದರ ಕಾರಣವು ಉಳಿದವರಿಗೆ ತಿಳಿದಿರಲಿಲ್ಲ. ಮಹಮೂದನು ಒಮ್ಮೆ ಯುದ್ಧವನ್ನು ಮುಗಿಸಿಕೊಂಡು ಸುಲಿಗೆಮಾಡಿ ತಂದ ಸಂಪತ್ತಿಯನ್ನು ಒಂಟೆಗಳ ಮೇಲೆ ಹೇರಿಸಿಕೊಂಡು ಮರಳಿ ತನ್ನ ರಾಜಧಾನಿಗೆ ನಡೆದಿದ್ದನು. ದಾರಿಯಲ್ಲಿ ಒಂದು ದೊಡ್ಡ ಮುತ್ತಿನ ಪೆಟ್ಟಿಗೆ ಒಂಟೆಯ ಮೇಲಿಂದ ಕೆಳಗೆ ಬಿದ್ದು ಒಡೆಯಲು, ಅದರೊಳಗಿನ ಮುತ್ತುಗಳೆಲ್ಲ ಸೂರೆಯಾಗಿ ಬಿದ್ದುವು. ಸುಲ್ತಾನನು—ನೀವು ಆರಿಸಿಕೊಳ್ಳುವ ಮುತ್ತುಗಳನ್ನು ನೀವೇ ತೆಗೆದುಕೊಳ್ಳಿರೆಂದು ತನ್ನ ಸೈನಿಕರಿಗೆಲ್ಲ ಹೇಳಿದನು. ಮುತ್ತಿನ ಆಶೆಯಿಂದ ಅವುಗಳನ್ನು ಆರಿಸಿಕೊಳ್ಳುವುದರಲ್ಲಿ ತೊಡಗಿದ ಎಲ್ಲ ಸೈನಿಕರು ಹಿಂದೆ ಉಳಿದರು. ಆದರೆ ಪ್ರಭುಭಕ್ತನಾದ ಆಇಯಾಜನು ಮಾತ್ರ ಸುಲ್ತಾನನ

ಸಂಗಡ ನಡೆದನು. ಮುತ್ತುಗಳನ್ನು ಬಿಟ್ಟು ನೀನೇಕೆ ಹಾಗೆಯೇ ಬಂದೆ ಎಂದು ಸುಲ್ತಾನನು ಕೇಳಲು, ಆತನು—ಒಡೆಯಾ, ನಾನು ಮಾಡುವ ಸೇವೆ ತಮ್ಮ ಸಲುವಾಗಿ ಅಲ್ಲದೆ, ತಾವು ಕೊಡುವ ಪದಾರ್ಥಗಳ ಸಲುವಾಗಿ ಅಲ್ಲ ಎಂದು ಹೇಳಿದನು.

ಶ್ರೀರಾಮಚಂದ್ರನು ರಾವಣನನ್ನು ಜಯಿಸಿ ಬಂದು ಪಟ್ಟಾಭಿಷಿಕ್ತನಾದ ಬಳಿಕ ಎಲ್ಲರಿಗೂ ಉಚಿತಗಳನ್ನು ಕೊಡುವಾಗ ಪ್ರಭುಭಕ್ತನಾದ ಮಾರುತಿಗೆ ನಿನಗೆ ಏನು ಬೇಕೆಂದು ಕೇಳಲು, ಆತನು ನನಗೆ ಯಾವ ಉಚಿತವೂ ಬೇಡ; ನಿನ್ನ ನಾಮಾಕ್ಷರಗಳು ಯಾವಾಗಲೂ ನನ್ನ ಹೃದಯದಲ್ಲಿ ನೆಲೆಸಿರಲಿ ಎಂದು ಕೇಳಿಕೊಂಡನು. ಯೋಗ್ಯರಾದ ಸಾಧುಗಳು ದೇವರಲ್ಲಿ ನಿಷ್ಕಾಮಭಕ್ತಿಯನ್ನಿಡುವರು. ಅಷ್ಟಸಿದ್ಧಿಗಳು ಒದಗುವಂತಿದ್ದರೂ ಅವುಗಳ ಮೇಲೆ ದೃಷ್ಟಿಯನ್ನಿಡುವುದಿಲ್ಲ. ಆ ಇಯಾಜನು ಪ್ರಭುಭಕ್ತಿಯಲ್ಲಿ ಅಂತಹ ಶ್ರೇಷ್ಠಭಾವವನ್ನು ತೋರ್ಪಡಿಸಿದನು.

---

ವಚನಪಾಲನ.

## ೧೦೨. ನೆಪೋಲಿಯನ್

ನೆಪೋಲಿಯನ್ ಬೋನಾಪಾರ್ಟನು ಬ್ರಾಯಿರೇನ್ ಎಂಬಲ್ಲಿಯ ಯುದ್ಧಕಲಾಶಾಲೆಯಲ್ಲಿರುವಾಗ ಅಲ್ಲಿ ಒಬ್ಬ ಹಣ್ಣು ಮಾರುವವಳ ಅಂಗಡಿಯಲ್ಲಿ ಉದ್ರಿಯಾಗಿ ಹಣ್ಣುಗಳನ್ನು ಕೊಂಡುಕೊಂಡು ತಿನ್ನುತ್ತಿದ್ದನು. ಮನೆಯವರು ಹಣವನ್ನು ಕಳುಹಿದೊಡನೆ ಉದ್ದರಿಯ ಲೆಕ್ಕವನ್ನು ಮೊದಲು ತೀರಿಸುವನು. ಆದರೂ ಹಣ್ಣಿನ ಮೇಲೆ ಪ್ರೀತಿಯುಳ್ಳ ನೆಪೋಲಿಯನನ ಉದ್ರಿಯು ಯಾವಾಗಲೂ ನಿಂತೇ ಇರುತ್ತಿತ್ತು. ಅಭ್ಯಾಸವು ಮುಗಿದ ಬಳಿಕ ವಿದ್ಯಾಲಯವನ್ನು ಬಿಟ್ಟು ಹೋಗುವಾಗಲೂ ಕೆಲವು ಆಣೆ ಕೊಡುವುದಿತ್ತು. ಹೊರಡುವಾಗ ನೆಪೋಲಿಯನನು ಆ ಹಣ್ಣಿನಾಕೆಗೆ ಅಮ್ಮಾ, ನನ್ನ ಬಳಿಯಲ್ಲಿ ಈಗ ಹಣವಿಲ್ಲ; ಬಾಕಿಯನ್ನು ಇನ್ನೊಮ್ಮೆ ಬಂದು ತೀರಿಸುವೆನು ಎಂದು ಹೇಳಿದನು. ಆಗ ಆಕೆ ಈ ವರೆಗೆ ನನ್ನ ಅಂಗಡಿಯಲ್ಲಿ ನೀನು ಬಹಳ ವ್ಯಾಪಾರ ಮಾಡಿರುವೆ; ನಿನ್ನಂಥ ಗಿರಾಕಿಯು ಇಲ್ಲಿಯ ಹುಡುಗರಲ್ಲಿ ಒಬ್ಬನೂ ಇರಲಿಲ್ಲ; ತಮ್ಮಾ, ಕೆಲವು ಆಣೆಗಳಿಗಾಗಿ ಇಲ್ಲಿಯವರೆಗೆ ಬರುವ ಅವಶ್ಯವಿಲ್ಲ ಎಂದು ಹೇಳಿದಳು.

ಈ ಮಾತಿಗೆ ಎಷ್ಟೋ ವರ್ಷಗಳು ಸಂದುಹೋಗಿವೆ. ಈಗ ನೆಪೋಲಿಯನನು ಫ್ರಾನ್ಸದ ಚಕ್ರವರ್ತಿ. ಒಂದು ದಿವಸ ಬ್ರಾಯಿರೇನದ ಯುದ್ಧ ಕಲಾಶಾಲೆಯನ್ನು ನೋಡುವುದಕ್ಕೆ ಹೋಗಿದ್ದಾನೆ. ಅತ್ತಿತ್ತ ತಿರುಗಾಡುವುದರೊಳಗೆ ಸಂಜೆಯಾಯಿತು. ಆಗ ಚಕ್ರವರ್ತಿಯು ಸಾಮಾನ್ಯ ವೇಷದಿಂದ ಆ ಹಣ್ಣಿನಾಕೆಯ ಅಂಗಡಿಗೆ ಹೋಗಿ ಉತ್ತಮವಾದ ಹಣ್ಣುಗಳನ್ನಾರಿಸಿಕೊಂಡು ಮೊದಲಿನಂತೆ ಅಲ್ಲಿಯೇ ತಿನ್ನುತ್ತ ಕುಳಿತುಕೊಂಡನು. ಮತ್ತು ಆಕೆಗೆ—ಅಮ್ಮಾ, ಈ ದಿವಸ ಈ ಊರಿಗೆ ಚಕ್ರವರ್ತಿ ಬಂದಿರುವನೇ ಎಂದು ಕೇಳಿದನು. ಆಗ ಆ ಮುದುಕೆ—ಅಹುದು; ಅವನು ಬಾಲ್ಯದಲ್ಲಿ ಇಲ್ಲಿ ಅಭ್ಯಾಸ ಮಾಡುತ್ತಿದ್ದನು. ಆತನು ನನ್ನ ಅಂಗಡಿಯ ಒಳ್ಳೆಯ ಗಿರಾಕಿಯಾಗಿದ್ದನು ಎಂದು ಹೇಳಿದಳು. ಆಗ ಚಕ್ರವರ್ತಿಯು—ಹಣವನ್ನು ಮುಟ್ಟಿಸುತ್ತಿದ್ದನೇ ಎಂದು ಕೇಳಲು ಮುದುಕೆ—ಅಹುದು; ಆತನು ದುಡ್ಡನ್ನು ಎಂದೂ ಮುಳುಗಿಸುತ್ತಿರಲಿಲ್ಲ ಎಂದಳು. ಆಗ ನೆಪೋಲಿಯನನು—ಅಮ್ಮಾ, ಆತನು ಈಗ ಚಕ್ರವರ್ತಿಯಾಗಿರುವನೆಂದು ಹೀಗೆ ಹೇಳುತ್ತೀಯೆ; ಆತನು ನಿನ್ನ ಕೆಲವು ಆಣೆಗಳನ್ನು ಇನ್ನೂ ಮುಟ್ಟಿಸಿಲ್ಲ, ಮುಳುಗಿಸಿದಂತೆ ತೋರುತ್ತದೆ; ಎಂದನು. ಆಗ ಆ ಮುದುಕೆ ಬೆಚ್ಚಿಬಿದ್ದು ಆತನ ದನಿಯಿಂದಲೂ, ಮುಖಚರ್ಯೆಯಿಂದಲೂ ಗುರುತು ಹಿಡಿದು ಆನಂದದಿಂದ ಚಕ್ರವರ್ತಿಯ ಕಾಲಿಗೆರಗಿದಳು.

ನೆಪೋಲಿಯನನು ಆ ಮುದುಕೆಗೆ ಎಷ್ಟೋ ಸಾವಿರ ಮೊಹರುಗಳನ್ನು ಕೊಟ್ಟನು. ಮತ್ತು ಆಕೆಯ ಮಗಳ ಲಗ್ನದ ವೆಚ್ಚವನ್ನು ನೋಡಿಕೊಂಡುದಲ್ಲದೆ ಮುದುಕೆಯ ಮಗನಿಗೆ ಅಲ್ಲಿಯ ಯುದ್ಧಕಲಾಶಾಲೆಯಲ್ಲಿ ಶಿಕ್ಷಣದ ವ್ಯವಸ್ಥೆಯನ್ನು ಮಾಡಿಕೊಟ್ಟು ಹೋದನು.

---

ದೃಢಭಕ್ತಿಯೂ, ವಿಶ್ವಾಸವೂ. **೧೦೩. ಮಣಿಕರ್ಣಿಕಾಸ್ನಾನ.**

ಒಂದಾನೊಂದು ದಿವಸ ಪಾರ್ವತಿಯು ಪರಮೇಶ್ವರನನ್ನು ಕುರಿತು—ಪ್ರಭೂ, ಈ ದಿವಸ ಗ್ರಹಣಕಾಲದಲ್ಲಿ ಮಣಿಕರ್ಣಿಕೆಯಲ್ಲಿ ಸ್ನಾನಮಾಡುವ ಲಕ್ಷಾವಧಿ ಜನರಲ್ಲಿ ಎಲ್ಲರೂ ಪುನೀತರಾಗುವರೇ ಎಂದು ಕೇಳಿದಳು. ಪರಮೇಶ್ವರನು—ದೇವೀ, ಮನಸ್ಸಿನಲ್ಲಿ ಭಕ್ತಿವಿಶ್ವಾಸಗಳು ದೃಢವಾಗಿ ಇದ್ದ ಹೊರತು ಬರಿಯ ಸ್ನಾನದಿಂದೇನು? ಶರೀರವು ಮಾತ್ರ ಸ್ವಚ್ಛವಾಗಬಹುದು;

ಬೇಕಾದರೆ ಇದನ್ನು ಪರೀಕ್ಷಿಸಿನೋಡು ಎಂದು ಹೇಳಿದನು. ಪರಮೇಶ್ವರನ ಸಲಹೆಯಿಂದ ಪಾರ್ವತಿಯು ಬ್ರಾಹ್ಮಣಸ್ತ್ರೀವೇಷವನ್ನು ಧರಿಸಿ ಗಂಗಾನದಿಯು ಮಣಿಕರ್ಣಿಕಾಸೋಪಾನದ ಬಳಿಯಲ್ಲಿ ಕುಳಿತುಕೊಂಡಳು. ಶಂಕರನು ಹೆಣದ ರೂಪದಿಂದ ಆಕೆಯ ಬಳಿಯಲ್ಲಿ ಬಿದ್ದುಕೊಂಡನು. ಗ್ರಹಣಕಾಲದಲ್ಲಿ ಸ್ನಾನ ಮಾಡಿ ಹೋಗುವವರನ್ನು ಕುರಿತು ಪಾರ್ವತಿಯು—ಅಯ್ಯಾ, ನಿಮ್ಮೊಳಗೆ ಪಾಪರಹಿತರಾದವರು ಯಾರಾದರೂ ದಯಮಾಡಿ ಬಂದು ನನ್ನ ಪತಿಯ ಶರೀರಕ್ಕೆ ಸ್ಪರ್ಶಮಾಡಿ ಹೋಗಿರಿ; ಅದರಿಂದ ನನ್ನ ಪತಿ ಬದುಕುವನು. ಏಕೆಂದರೆ, ಆ ಮೇರೆಗೆ ದೇವರ ವರವು ಸಿಕ್ಕಿರುವುದು. ಇನ್ನು ಪಾಪರಹಿತರಾಗದಂಥವರು ಸ್ಪರ್ಶಮಾಡಿದರೆ ತಾವೇ ಸತ್ತುಹೋಗುವರು ಎಂದು ದೈನ್ಯಬಟ್ಟು ಹೇಳುತ್ತಿದ್ದಳು. ಆ ಹೆಣವನ್ನು ಮುಟ್ಟುವ ಧೈರ್ಯವು ಯಾರಿಗೂ ಆಗಲಿಲ್ಲ. ಅಷ್ಟರಲ್ಲಿ ಅಂತ್ಯಜನೊಬ್ಬನು ಸ್ನಾನಕ್ಕಾಗಿ ಬರುತ್ತಿದ್ದನು. ಹೆಂಗುಸು ಅಂಗಲಾಚಿ ಬೇಡಿಕೊಳ್ಳುವುದನ್ನು ಕೇಳಿ ಆತನು ಅಮ್ಮಾ, ನಾನು ಅಲ್ಪನು! ಪಾಪಿಯು; ಆದರೂ ಈ ಪರ್ವಕಾಲದಲ್ಲಿ ಮಣಿಕರ್ಣಿಕಾಸ್ನಾನಮಾಡಿದವರು ದೇವಾಧಿದೇವನಾದ ಮಹಾದೇವನ ವರದಿಂದ ಪುನೀತರಾಗುವರಂತೆ. ಆದುದರಿಂದ ಸ್ನಾನಮಾಡಿ ನಾನೂ ಈಗಲೇ ಪಾಪರಹಿತನಾಗುವೆನು. ಅಮ್ಮಾ, ಸ್ವಲ್ಪ ತಡೆ; ಒಂದು ಮುಳುಗುಹಾಕಿ ಬರುವೆನು ಎಂದು ಹೇಳಿ ಕೂಡಲೆ ಸ್ನಾನಮಾಡಿ ಬಂದು ನಿರ್ಭಯನಾಗಿ ಆ ಹೆಣವನ್ನು ಮುಟ್ಟಿದನು. ಬ್ರಾಹ್ಮಣನು ಎದ್ದು ಕುಳಿತನು. ಆಗ ಶಂಕರನು—ಈ ದಿವಸ ಸ್ನಾನಮಾಡಿದ ಇಷ್ಟು ಜನರಲ್ಲಿ ಇವನೊಬ್ಬನ ಸ್ನಾನವು ನಿಜವಾದ ಸ್ನಾನವೆಂದು ಹೇಳಿದನು.

---

ಸರಳತನ.

## ೧೦೪. ಸತ್ಯವನ್ನು ಹೇಳಿದ ಕಳ್ಳನು.

ಇಟಲಿ, ಸ್ಪೇನ್, ಫ್ರಾನ್ಸ್ ಮೊದಲಾದ ಪಾಶ್ಚಾತ್ಯದೇಶಗಳಲ್ಲಿ ಒಂದಾನೊಂದು ಕಾಲದಲ್ಲಿ ಶಿಕ್ಷೆಹೊಂದಿದ ಅಪರಾಧಿಗಳನ್ನು ಹಡಗಗಳಲ್ಲಿ ಸೆರೆಯಿಟ್ಟು ಅಲ್ಲಿಯೇ ದುಡಿಸಿಕೊಳ್ಳುವ ಪದ್ಧತಿಯಿದ್ದಿತು. ಒಂದು ದಿವಸ ನೇಪಲ್ಸದ ರಾಜಪ್ರತಿನಿಧಿಯು (ಗವ್ಹರ್ನರನು) ಒಂದು ಹಡಗವನ್ನೇರಿ ವಿನೋದಕ್ಕಾಗಿ ಅತ್ತಿತ್ತ ತಿರುಗಾಡುತ್ತಿದ್ದನು. ಅಲ್ಲಿ ಒಂದು ಕಡೆಗೆ ಸಾಲಾಗಿ ನಿಂತು ಕೆಲಸ ಮಾಡುತ್ತಿದ್ದ ಸೆರೆಯಾಳುಗಳನ್ನು ಕಂಡು ಅವರ ಬಳಿಗೆ ಹೋಗಿ ಪ್ರತಿಯೊಬ್ಬನನ್ನು ಕುರಿತು ನೀನು ಯಾವ ತಪ್ಪಿಗಾಗಿ ಶಿಕ್ಷೆಯನ್ನು ಹೊಂದಿರುವೆ

ಯೆಂದು ಕೇಳುತ್ತ ನಡೆದನು. ಒಬ್ಬನು ತನಗೆ ಸುಳ್ಳುಸಾಕ್ಷಿಗಳಿಂದ ಶಿಕ್ಷೆಯಾಯಿತೆಂದೂ, ಇನ್ನೊಬ್ಬನು ನ್ಯಾಯಾಧೀಶನು ಲಂಚವನ್ನು ತಿಂದು ಶಿಕ್ಷೆ ಕೊಟ್ಟಿರುವನೆಂದೂ, ಮತ್ತೊಬ್ಬನು ತನ್ನ ವಕೀಲನ ವಿಶ್ವಾಸಘಾತದಿಂದ ಶಿಕ್ಷೆಯಾಯಿತೆಂದೂ ಹೇಳಿದರು. ಹೀಗೆ ಎಲ್ಲರೂ ತಾವು ನಿರ್ದೋಷಿಗಳೆಂದು ಸಾಧಿಸಿದರು. ಆದರೆ ಅವರಲ್ಲೊಬ್ಬನು ಮಾತ್ರ—ತಾನು ಒಂದು ದಿವಸ ಹೊಟ್ಟೆಗೆ ಗತಿಯಿಲ್ಲದೆ ಕಂಗೆಟ್ಟು ಕಳವು ಮಾಡಿ ಶಿಕ್ಷೆಹೊಂದಿರುವೆನೆಂದು ಹೇಳಿದನು. ಆಗ ರಾಜಪ್ರತಿನಿಧಿಯು ಒಮ್ಮೆಲೆ ಭಯಂಕರವಾಗಿ ಸಿಟ್ಟಿಗೆದ್ದಂತೆ ತೋರ್ಪಡಿಸಿ ಕೈಯೊಳಗಿದ್ದ ಬೆತ್ತದಿಂದ ಆ ಕಳ್ಳನ ಬೆನ್ನ ಮೇಲೆ ಹೊಡೆದು ಆತನನ್ನು ಕುರಿತು—ಛೀ ನೀಚಾ, ಈ ಎಲ್ಲ ಸಂಭಾವಿತರೊಳಗೆ ನೀನೊಬ್ಬನು ಮಾತ್ರ ಕಳ್ಳನು ಏಕೆ ನಿಂತಿರುವೆ? ಈ ಸದ್ಗೃಹಸ್ಥರೊಳಗೆ ಸೇರುವುದಕ್ಕೆ ನಿನಗೆ ನಾಚಿಕೆ ಬರುವುದಿಲ್ಲವೇ ಎಂದು ಬೆದರಿಸಿ ಅವನನ್ನು ಅಲ್ಲಿಂದ ಹೊರಗೆ ಹೊರಡಿಸಿಬಿಟ್ಟನು. ಸತ್ಯವನ್ನು ನುಡಿದ ಕಳ್ಳನು ಬಿಡುಗಡೆಹೊಂದಿ ರಾಜಪ್ರತಿನಿಧಿಗೆ ತಲೆವಾಗಿ, ನಗುತ್ತ ಹೊರಟುಹೋದನು.

---

ಗುರುಗಳ ಅಭಾವವಿಲ್ಲ.

## ೧೦೫. ೨೪ ಜನ ಗುರುಗಳು.

ಒಂದಾನೊಂದು ಕಾಲದಲ್ಲಿ ಯದುಮಹಾರಾಜನು ಬಾಲಕರಂತೆ ಸಹಜಾನಂದದಿಂದ ತಿರುಗಾಡುತ್ತಿರುವ ದತ್ತಾವಧೂತರನ್ನು ಕುರಿತು ನಿಮಗೆ ಈ ಆನಂದಸ್ಥಿತಿಯು ಹೇಗೆ ಒದಗಿತೆಂದು ಪ್ರಶ್ನಮಾಡಲು, ಅವರು ನಾನು ಹಲವು ಜನಗುರುಗಳಿಂದ ಹಲವು ಮಾತುಗಳನ್ನು ಕಲಿತುಕೊಂಡು ನಿಜವಾದ ಜ್ಞಾನವನ್ನು ಪಡೆದಿರುವುದೇ ಅದರ ಕಾರಣವು ಎಂದು ಹೇಳಿದರು. ಬಹುಜನರು ತಮಗೆ ಯೋಗ್ಯಗುರುಗಳು ದೊರೆಯಲಿಲ್ಲವೆಂದೂ ಆ ಕಾರಣ ತಾವು ನಿಕೃಷ್ಟಸ್ಥಿತಿಯಲ್ಲಿ ಉಳಿದೆವೆಂದೂ ಹೇಳುವರು. ಅವರು ಶ್ರೀಮದ್ಭಾಗವತದಲ್ಲಿ ದತ್ತಾವಧೂತರು ನಿರೂಪಿಸಿದ ವಿಷಯವನ್ನು ಮನನ ಮಾಡುವುದು ಉಚಿತವು. ದತ್ತಾವಧೂತರ ೨೪ ಜನ ಗುರುಗಳು:—೧ ಪೃಥ್ವಿ, ೨ ವಾಯು, ೩ ಆಕಾಶ, ೪ ಜಲ, ೫ ಅಗ್ನಿ, ೬ ಚಂದ್ರ, ೭ ಸೂರ್ಯ, ೮ ಪಾರಿವಾಳ, ೯ ಅಜಗರ, ೧೦ ಸಮುದ್ರ, ೧೧ ಪತಂಗ, ೧೨ ಮಧುಕರ, ೧೩ ಗಜ, ೧೪ ಜೇನು ಬಿಡಿಸುವವ, ೧೫ ಹರಿಣ, ೧೬ ಮೀನ, ೧೭ ಪಿಂಗಲೆ

ಯೆಂಬ ವೇಶ್ಯಾಂಗನೆ, ೧೮ ಕುರುಪಕ್ಷಿ, ೧೯ ಶಿಶು ೨೦ ಕುಮಾರಿ, ೨೧ ಬಾಣಕಾರ, ೨೨ ಸರ್ಪ, ೨೩ ಜೇಡಹುಳು, ೨೪ ಕುರಡೀಕುಠಾರ.

ಈ ಗುರುಗಳಿಂದ ದೊರೆಯುವ ಬೋಧಗಳೇನೆಂದರೆ:—

(೧) **ಪೃಥ್ವಿ**—ಪ್ರಾಣಿಗಳು ಬೇಕಾದಷ್ಟು ಪೀಡೆಯನ್ನು ಕೊಟ್ಟರೂ ಪೃಥ್ವಿಯು ಸಹಿಸಿಕೊಳ್ಳುವುದು. ಚಳಿ, ಗಾಳಿ, ಬಿಸಿಲು, ಮಂಜು, ಇವುಗಳಿಗೆ ಅದು ಅಳುಕುವುದಿಲ್ಲ. ಹಾಗೆ ವಿವೇಕಿಯು ಪರರಿಂದ ಪೀಡಿಸಲ್ಪಟ್ಟರೂ ಸನ್ಮಾರ್ಗವನ್ನು ಬಿಡುವುದಿಲ್ಲ.

(೨) **ವಾಯು**—ವಾಯುವು ಸುಗಂಧ ದುರ್ಗಂಧ ಪದಾರ್ಥಗಳೆರಡರ ಮೇಲೆ ಹಾಯ್ದು ಆ ಗಂಧಗಳನ್ನು ವಹಿಸಿದಂತೆ ತೋರಿದರೂ ಅವುಗಳಲ್ಲಿ ಅನಾಸಕ್ತವಾಗಿರುವಂತೆ ಸಮದರ್ಶಿಗಳಾದ ಯೋಗಿಗಳು ಪಾರ್ಥಿವ ದೇಹಗಳಲ್ಲಿ ಪ್ರವಿಷ್ಟರಾಗಿದ್ದರೂ ದೇಹಧರ್ಮಗಳಿಂದ ಕೂಡಿದವರಾಗುವುದಿಲ್ಲ.

(೩) **ಆಕಾಶ**—ವಾಯುವಿನಿಂದ ಚದರಿಸಲ್ಪಟ್ಟ ಮೇಘಗಳು ಆಕಾಶದಲ್ಲಿದ್ದರೂ ಆಕಾಶವು ಮೇಘಗಳಿಂದ ಸಂಸಕ್ತವಾಗುವುದಿಲ್ಲ. ಹಾಗೆ ಆತ್ಮವಸ್ತುವು ದೇಹಾದಿಗಳೊಡನೆ ಸಂಸಕ್ತವಾಗುವುದಿಲ್ಲ; ಆದುದರಿಂದ ಸಾಧುಗಳು ಜಡದೇಹಗಳಲ್ಲಿ ಸೇರಿಕೊಂಡಿದ್ದರೂ ಬ್ರಹ್ಮಸ್ವರೂಪವನ್ನರಿತವರಾಗಿ ಆತ್ಮವು ನಿಃಸಂಗವಾಗಿರುವುದೆಂದು ತಿಳಿಯುವರು.

(೪) **ಜಲ**—ನಿರ್ಮಲವಾಗಿಯೂ, ಸ್ವಭಾವಶೀತಲವಾಗಿಯೂ, ಮಧುರವಾಗಿಯೂ ಇರುವ ಜಲವು ಜನರಲ್ಲಿ ಪವಿತ್ರತೆಯನ್ನುಂಟುಮಾಡುವಂತೆ ಯೋಗಿಯು ಜ್ಞಾನೋಪದೇಶದಿಂದ ಜಗವನ್ನು ಪವಿತ್ರಮಾಡಬೇಕು.

(೫) **ಅಗ್ನಿ**—ಜ್ಞಾನಬಲದಿಂದ ತೇಜಸ್ವಿಗಳೂ, ತಪೋಬಲದಿಂದ ಉಜ್ವಲರೂ ಆದ ಸಂಯಮಿಗಳು ಬೇಕಾದಲ್ಲಿ ಆಹಾರಗ್ರಹಣಮಾಡಿದರೂ ಅಗ್ನಿಯಂತೆ ಪವಿತ್ರರಾಗಿಯೇ ಇರುವರು. ಮತ್ತು ಅಗ್ನಿಯಂತೆ ಕೆಲವು ವೇಳೆ ಅಡಗಿದವರೂ, ಕೆಲವು ವೇಳೆ ಪ್ರಕಟಿತರೂ ಆಗಿ ಕಲ್ಯಾಣಾಪೇಕ್ಷಿಗಳಾದ ದಾತೃಗಳು ಕೊಟ್ಟ ಅನ್ನವನ್ನು ಸ್ವೀಕರಿಸುವರು. ಅಗ್ನಿಯು ಪೂಜಕರ ಇಚ್ಛೆಯಂತೆ ಹವಿಸ್ಸನ್ನು ಸ್ವೀಕರಿಸುವಂತೆ ಮುನಿಗಳು ಭಕ್ತರು ಕೊಟ್ಟ ಪದಾರ್ಥಗಳನ್ನು ಸ್ವೀಕರಿಸಿದರೂ ಪಾಪಭಾಗಿಗಳಾಗುವುದಿಲ್ಲ. ಅಗ್ನಿಯು ಕಾಷ್ಠಗಳಲ್ಲಿ ಸೇರಿರುವಂತೆ ಆತ್ಮವು ತನ್ನ ಮಾಯೆಯಿಂದ ನಿರ್ಮಿತವಾದ ಈ ವಿಶ್ವದಲ್ಲಿ ಪ್ರವೇಶಿಸಿ ತತ್ಸ್ವರೂಪವನ್ನು ಹೊಂದಿ ಇರುವುದು.

(೬) **ಚಂದ್ರ**—ಚಂದ್ರನು ಇದ್ದಷ್ಟೇ ಇದ್ದರೂ ಕಲೆಗಳ ಕ್ಷಯ ವೃದ್ಧಿಗಳಿಂದ ಆತನು ಕ್ಷಯವೃದ್ಧಿಗಳುಳ್ಳವನಂತೆ ತೋರುವನು. ಹಾಗೆ ಜನ್ಮದಿಂದ ಮರಣದ ವರೆಗಿನ ಎಲ್ಲ ಅವಸ್ಥೆಗಳು ದೇಹಕ್ಕಲ್ಲದೆ ಆತ್ಮನಿಗೆ ಅಲ್ಲ ವೆಂದು ಜ್ಞಾನಿಗಳು ತಿಳಿದುಕೊಳ್ಳುವರು.

(೭) **ಸೂರ್ಯ**—ಸೂರ್ಯನು ಕಾಲಾನುಸಾರವಾಗಿ ಜಲವನ್ನು ಗ್ರಹಿಸುವನು, ಮತ್ತು ಬಿಡುವನು. ಹಾಗೆ ಯೋಗಿಗಳು ಇಂದ್ರಿಯಗಳಿಂದ ವಿಷಯಗಳನ್ನು ಗ್ರಹಿಸುವರು, ಮತ್ತು ಬಿಡುವರು. ಸೂರ್ಯನು ಒಬ್ಬನೇ ಇದ್ದರೂ ಬೇರೆ ಬೇರೆ ಜಲಾಶಯಗಳಲ್ಲಿ ಪ್ರತಿಬಿಂಬಿತನಾಗಿರುವಾಗ ಮಂದ ಬುದ್ಧಿಗಳು ಅವುಗಳಲ್ಲಿ ಭೇದವನ್ನು ಗ್ರಹಿಸುವಂತೆ ಆತ್ಮನು ದೇಹೋಪಾಧಿ ಗಳಿಂದ ಬೇರೆ ಬೇರೆಯಾಗಿ ತೋರಿದರೂ ಬಲ್ಲವರು ಆತನು ಒಬ್ಬನೇ ಎಂದು ಭಾವಿಸುವರು.

(೮) **ಪಾರಿವಾಳ**—ಈ ಸಂಸಾರದಲ್ಲಿ ಯಾರೂ ಮೋಹವನ್ನು ಮಾಡಬಾರದು. ಹಾಗೆ ಮಾಡಿದರೆ ಅಲ್ಪಬುದ್ಧಿಯಾದ ಪಾರಿವಾಳದಂತೆ ನಾಶವನ್ನು ಹೊಂದುವರು. ಒಂದು ಪಾರಿವಾಳವು ಒಂದು ಮರದಲ್ಲಿ ಗೂಡು ಕಟ್ಟಿಕೊಂಡು ಹೆಣ್ಣಿನೊಡನೆ ಸುಖವಾಗಿ ಇತ್ತು. ಹೆಣ್ಣು ಕೆಲಕಾಲದಲ್ಲಿ ತತ್ತಿಗಳನ್ನಿಟ್ಟಿತು. ಆ ತತ್ತಿಗಳಲ್ಲಿ ಪರಮೇಶ್ವರನ ಲೀಲೆಯಿಂದ ಕೆಲವು ಮರಿ ಗಳು ಹುಟ್ಟಿದುವು. ಗಂಡುಹೆಣ್ಣುಗಳು ಕೂಡಿ ಮರಿಗಳನ್ನು ಬಹುವಿಧವಾಗಿ ಪೋಷಿಸುತ್ತ ಬಂದುವು. ಒಂದಾನೊಂದು ದಿವಸ ಒಬ್ಬ ಬಲೆಗಾರನು ಈ ಪಾರಿವಾಳಗಳ ಮರಿಗಳನ್ನು ಬಲೆ ಒಡ್ಡಿ ಹಿಡಿಯಲು, ಗಂಡುಹೆಣ್ಣುಗಳು ಮರಿಗಳ ಮೇಲಿನ ಮೋಹದಿಂದ ತಾವೂ ಬಲೆಯಲ್ಲಿ ಹೋಗಿ ಬಿದ್ದುವು. ವಿವೇಕವೈರಾಗ್ಯಗಳಿಲ್ಲದ ಸಾಧಾರಣಜನರು ಮೋಹಯುಕ್ತವಾದ ಪಾರಿವಾಳ ದಂತೆ ಕುಟುಂಬಪೋಷಣದಲ್ಲಿ ಆಸಕ್ತರಾಗಿ ಕಾಲವಿಪರ್ಯಾಸವಾಗಲು, ದುಃಖಿತರಾಗಿ ನಾಶಹೊಂದುವರು. ಮೋಕ್ಷಮಂದಿರದ ದ್ವಾರದಂತಿರುವ ಮನುಷ್ಯಜನ್ಮವನ್ನು ಹೊಂದಿಯೂ ಪಾರಿವಾಳದಂತೆ ಮಿತಿಮೀರಿ ಗೃಹಾಸಕ್ತ ರಾದವರು ಆರೂಢಚ್ಯುತ(ಮೇಲೆ ಏರಿ ಕೆಳಗೆ ಬಿದ್ದವ)ರೆಂದು ಹೇಳಲ್ಪಡುವರು.

(೯) **ಅಜಗರ**—ಅಜಗರವು ಆಹಾರಕ್ಕಾಗಿ ಯತ್ನಮಾಡದೆ ಬಿದ್ದು ಕೊಂಡಿರುವುದು. ತಾನಾಗಿ ಬಂದ ಆಹಾರವು ಸರಸವಿರಲಿ, ವಿರಸವಿರಲಿ,

ಸ್ವಲ್ಪವಿರಲಿ, ಬಹಳವಿರಲಿ ಅದನ್ನೇ ಸ್ವೀಕರಿಸಿ ಇರುವುದು. ಹಾಗೆ ಯೋಗಿಯು ತಾನಾಗಿ ದೊರೆತ ಆಹಾರದಿಂದ ತೃಪ್ತನಾಗಿ ತನ್ನ ಶಕ್ತಿಯನ್ನೆಲ್ಲ ಆತ್ಮವಿಚಾರ ದಲ್ಲಿ ವ್ಯಯಮಾಡಬೇಕು. ಆಹಾರಸಂಪಾದನೆಯಲ್ಲಿ ತನ್ನ ಶಕ್ತಿಯ ವ್ಯಯ ಮಾಡಬಾರದು. ಮನುಷ್ಯರು ತಮ್ಮ ಇಚ್ಛೆಯಿಂದ ಮಾಡುವ ಕರ್ಮಗಳ ಫಲ ವನ್ನು ಸ್ವರ್ಗದಲ್ಲಿಯೂ ನರಕದಲ್ಲಿಯೂ ಪಡೆಯುವರು. ಆದುದರಿಂದ ಸಕಾ ಮಕರ್ಮಗಳನ್ನು ಮಾಡಬಾರದು. ಅಜಗರನಂತೆ ಉದಾಸೀನರಾಗಿರಬೇಕು.

(೧೦) **ಸಮುದ್ರ**—ಮುನಿಗಳು ಸಮುದ್ರದಂತೆ ಪ್ರಶಾಂತರೂ, ಗಂಭೀರರೂ ಆಗಿರಬೇಕು. ಸಮುದ್ರವು ಸಂಚಯದಿಂದ ಉಬ್ಬದೆ ವ್ಯಯ ದಿಂದ ಕುಗ್ಗದೆ ಇರುವಂತೆ ಪರಮಾತ್ಮನಿಷ್ಠರಾದ ಯೋಗಿಗಳು ಲಾಭಾಲಾಭ ಗಳಿಂದ ಹರ್ಷವಿಷಾದಗಳನ್ನು ಹೊಂದುವುದಿಲ್ಲ.

(೧೧) **ಪತಂಗ**—ಪತಂಗವು ದೀಪಕ್ಕೆ ಮೋಹಿಸಿ ಅದರಲ್ಲಿ ಬಿದ್ದು ನಾಶಹೊಂದುವುದು. ಹಾಗೆ ದೂರದರ್ಶಿಗಳಾದವರು ಮಾಯಾನಿರ್ಮಿತ ವಾದ ಭೋಗ್ಯವಸ್ತುಗಳಲ್ಲಿ ಮೋಹಿಸಿ ಬಿದ್ದು ನಾಶಹೊಂದಬಾರದು.

(೧೨) **ಮಧುಕರ**—ಮಧುಕರಗಳಲ್ಲಿ ತುಂಬಿ, ಜೇನ್ನೊಣಗಳೆಂದು ಎರಡು ಪ್ರಕಾರಗಳು. ತುಂಬಿಯು ಆ ಪುಷ್ಪದಲ್ಲಿ ಸ್ವಲ್ಪ, ಈ ಪುಷ್ಪದಲ್ಲಿ ಸ್ವಲ್ಪ ಆಹಾರವನ್ನು ಗ್ರಹಿಸುವಂತೆ ಮುನಿಗಳು ಗೃಹಪೀಡನ (ಗೃಹಸ್ಥರಿಗೆ ತೊಂದರೆ) ವಾಗದಂತೆ, ತಮ್ಮ ದೇಹಧಾರಣವು ಆಗುವಂತೆ ಮಧುಕರವೃತ್ತಿ ಮಧುಕರಿ) ಯಿಂದ ಅನ್ನವನ್ನು ಸಂಪಾದಿಸಿ ಜೀವಿಸುವರು. ಇನ್ನು ಜೇನ್ನೊ ಣಗಳು ಎಲ್ಲ ಪುಷ್ಪಗಳಿಂದ ಮಧುವನ್ನು ಸ್ವೀಕರಿಸಿ ಸಂಗ್ರಹಿಸುವಂತೆ ಪಂಡಿ ತರು ಸಕಲಶಾಸ್ತ್ರಗಳಿಂದ ಸಾರವನ್ನು ಸಂಗ್ರಹಿಸಬೇಕು.

(೧೩) **ಆನೆ**—ಗಂಡಾನೆಯು ಹೆಣ್ಣಿಗಾಗಿ ಹೋಗಿ ತಗ್ಗಿನಲ್ಲಿ ಬೀಳು ವುದು. ಆದುದರಿಂದ ಬ್ರಹ್ಮನಿಷ್ಠರು ಸ್ತ್ರೀಯನ್ನು, ಸ್ತ್ರೀಪ್ರತಿಮೆಯನ್ನು ಕೂಡ ನೋಡಬಾರದು.

(೧೪) **ಜೇನು ಬಿಡಿಸುವವ**—ಭಿಕ್ಷುಕನು ತನ್ನ ಹೊಟ್ಟೆಯೇ ಸಂಗ್ರಹಸ್ಥಾನವೆಂದು ತಿಳಿಯಬೇಕು. ಬೇರೆ ಕಡೆಗೆ ಸಂಗ್ರಹಮಾಡಬಾರದು. ಹಾಗೆ ಸಂಗ್ರಹಮಾಡಿದರೆ ಜೇನು ಬಿಡಿಸುವುದರಿಂದ ಜೇನ್ನೊಣಗಳಂತೆ ಸಂಗ್ರಹದೊಡನೆ ನಾಶಹೊಂದುವರು.

(೧೫) **ಹರಿಣ**—ಸಂಯಮಿಗಳು ಎಂದೂ ಗಾಯನವನ್ನು ಕೇಳ ಬಾರದು. ಕೇಳಿದರೆ ಬೇಡನ ಗಾಯನವನ್ನು ಕೇಳಿ ಮೋಹಿಸಿ ಹರಿಣವು ಬಂಧನ ಹೊಂದುವಂತೆ ಬಂಧನ ಹೊಂದುವರು.

(೧೬) **ಮೀನ**—ಮೀನವು ಗಾಳಕ್ಕೆ ಹತ್ತಿಸಿದ ಆಮಿಷಕ್ಕೆ ಮರು ಳಾಗಿ ಅದನ್ನು ತಿನ್ನಹೋಗಿ ಗಂಟಲಿಗೆ ಗಾಳವು ಸಿಲುಕಲು ಸತ್ತುಹೋಗು ವುದು. ಹಾಗೆ ದುರ್ಬುದ್ಧಿಗಳು ಜಿಹ್ವಾಚಾಪಲ್ಯಕ್ಕೆ ಸೋತು ಸವಿಯೂಟ ಗಳ ಆಸ್ವಾದನದ ಮೋಹದಿಂದ ಮೃತ್ಯುಮುಖದಲ್ಲಿ ಬೀಳುವರು. ನಾಲಗೆ ಯನ್ನು ಬಿಗಿಹಿಡಿಯಲಾರದವರು ಜಿತೇಂದ್ರಿಯರಾಗಲಾರರು.

(೧೭) **ಪಿಂಗಲೆ**—ಪೂರ್ವಕಾಲದಲ್ಲಿ ವಿದೇಹನಗರದಲ್ಲಿ ಪಿಂಗಲೆ ಎಂಬ ವೇಶ್ಯಾಂಗನೆ ಇದ್ದಳು. ಆ ಜಾರಿಣಿ ಒಂದು ದಿವಸ ಬಹುಮೂಲ್ಯ ವಸ್ತ್ರಾಭರಣಗಳನ್ನು ಧರಿಸಿಕೊಂಡು ಬಾಗಿಲಲ್ಲಿ ನಿಂತು—ಈ ದಿವಸ ಯಾವ ನೊಬ್ಬ ಶ್ರೀಮಂತನು ತನ್ನ ಬಳಿಗೆ ಬಂದು ವಿಪುಲವಾದ ಧನವನ್ನು ಕೊಟ್ಟಾನೇ, ಎಂದು ಚಿಂತಿಸುತ್ತಿದ್ದಳು. ಆ ಮಾರ್ಗ ಹಿಡಿದು ಬಹುಜನರು ಬರುತ್ತ ಹೋಗುತ್ತ ಇದ್ದರೂ ಒಬ್ಬನು ಕೂಡ ಆ ದಿವಸ ಪಿಂಗಲೆಯ ಬಳಿಗೆ ಬರಲಿಲ್ಲ. ಹೊತ್ತು ಮೀರಿದ ಬಳಿಕ ಒಳಗೆ ಹೋಗುತ್ತ ಮತ್ತೆ ದುರಾಶೆಯಿಂದ ಹೊರಗೆ ಬರುತ್ತ ಇಡಿ ರಾತ್ರಿಯನ್ನು ಕಳೆದ ಬಳಿಕ ಜಾಗರಣೆಯಿಂದ ಅವಳ ಮುಖವು ಕಳೆಗುಂದಿತು; ಪ್ರಾಪ್ತಿಯಿಲ್ಲದುದರಿಂದ ಮನಸ್ಸು ಅತ್ಯಂತ ದುಃಖಿತವಾಯಿತು. ಆಗ ಅವಳಿಗೆ ಒಮ್ಮೆಲೆ ಅತ್ಯಂತ ನಿರ್ವೇದವುಂಟಾ ಯಿತು. ನಿರ್ವೇದವು ಆಶಾಲತೆಯನ್ನು ಛೇದಿಸುವ ಖಡ್ಗವು. ಯಾವನಿಗೆ ನಿರ್ವೇದವಿಲ್ಲವೋ ಆತನು ದೇಹಬಂಧನವನ್ನು ಕಡಿದುಕೊಳ್ಳಲಾರನು. ಪಿಂಗ ಲೆಯು:—"ಅಯ್ಯೋ, ನಾನೆಂತಹ ಪಾಪಿಯು! ಮನಸ್ಸನ್ನು ವಶಪಡಿಸಿ ಕೊಳ್ಳದೆ ಬಳಲಿದೆನು. ರಾಜ್ಯಕ್ಕಿಂತ, ಸಕಲಭೋಗಗಳಿಗಿಂತ ಹೆಚ್ಚಿನ ಸುಖ ವನ್ನು ಕೊಡುವ ಪರಮಪುರುಷನನ್ನು ಮರೆತು ಕ್ಷಣಿಕ ತುಚ್ಛಸುಖವನ್ನು ಕೊಡುವ ಪರಪುರುಷರ ಹಂಬಲದಿಂದ ಅವರಿಗೆ ದೇಹವನ್ನು ಮಾರಿಕೊಳ್ಳುವ ದುರ್ವ್ಯಾಪಾರದಲ್ಲಿ ತೊಡಗಿದೆನಲ್ಲ? ಆ ಪರಮಪುರುಷನೇ ಪ್ರಾಣಿಗಳಿಗೆ ಅತ್ಯಂತ ಪ್ರಿಯನು; ಆತನೇ ಈ ದಿವಸ ನನ್ನ ಮನಸ್ಸನ್ನು ತನ್ನ ಚರಣಗಳ ಕಡೆಗೆ ತಿರುಗಿಸಿ ನನ್ನ ಮೇಲೆ ಅಪಾರಕೃಪೆಯನ್ನು ತೋರ್ಪಡಿಸಿದನು."

ಎಂದು ವಿಚಾರಮಾಡಿ ಶಾಂತಿಯನ್ನು ಪಡೆದ ಆ ಪಿಂಗಲೆಯು ಆಗ ಸುಖ ದಿಂದ ನಿದ್ರೆಮಾಡಿದಳು. ಮತ್ತು ಬಳಿಕ ತೀರ್ಥಯಾತ್ರೆಗಳನ್ನು ಮಾಡುತ್ತ ಪರಮೇಶ್ವರನ ಚಿಂತನೆಯಲ್ಲಿ ಕಾಲಕಳೆದಳು.

(೧೮) **ರುರುಪಕ್ಷಿ**—ರುರುಪಕ್ಷಿಯು ಮಾಂಸಾದಿಗಳನ್ನು ಸಂಗ್ರಹ ಮಾಡಲು, ಆಹಾರವಿಲ್ಲದ ಬೇರೆ ರುರುಪಕ್ಷಿಗಳು ಅದನ್ನು ಆಕ್ರಮಿಸಿ ಕೊಂದು ಬಿಡುವುವು. ಅದೇ ರುರುಪಕ್ಷಿಯು ಆ ಮಾಂಸವನ್ನು ಬಿಟ್ಟು ಕೊಟ್ಟು ಓಡಿ ಹೋದರೆ ಅದಕ್ಕೆ ಯಾವ ಕಷ್ಟವೂ ಇಲ್ಲ; ವಿಷಯಗಳೊಡನೆ ಆಸಕ್ತಿಯೇ ದುಃಖದ ಮೂಲವು.

(೧೯) **ಶಿಶು**—ಶಿಶುವು ತನ್ನೊಳಗೆ ತಾನೇ ಆನಂದಬಡುವುದು; ಚಿಂತೆಯನ್ನು ಅರಿಯದು; ನಗುವುದು. ಆಡುವುದು. ಹಾಗೆ ಬಲ್ಲವರು ತಮ್ಮೊಳಗೆ ತಾವೇ ಆನಂದಬಡುವವರಾಗಿ ಚಿಂತೆಯನ್ನು ಮಾಡಿಕೊಳ್ಳದೆ ಸಂಸಾರವನ್ನು ಸಾಗಿಸುವರು. ಈ ಪ್ರಪಂಚದಲ್ಲಿ ಅಜ್ಞಶಿಶುವೂ ತ್ರಿಗುಣಾತೀತ ಪುರುಷನೂ ಇಬ್ಬರೇ ಚಿಂತಾರಹಿತರೂ,ಸಹಜಾನಂದಮಯರೂ ಆಗಿರುವರು.

(೨೦) **ಕುಮಾರಿ**—ಒಂದಾನೊಂದು ದಿವಸ ಕೆಲವು ಜನ ಅತಿಥಿಗಳು ಒಬ್ಬ ಸದ್ಗೃಹಸ್ಥನ ಮನೆಗೆ ಬಂದರು. ಆಗ ಮನೆಯಲ್ಲಿ ಆತನ ಸಣ್ಣಮಗ ಳೊಬ್ಬಳು ಹೊರತು ಇನ್ನಾರೂ ಇರಲಿಲ್ಲ. ಅವಳೇ ಅತಿಥಿಗಳನ್ನು ಕರೆದು ಕುಳ್ಳಿರಿಸಿದಳು. ಅತಿಥಿಗಳ ಊಟಕ್ಕೆ ಮನೆಯಲ್ಲಿ ಅಕ್ಕಿ ಇಲ್ಲದಿರಲು ಬತ್ತವನ್ನು ಕುಟ್ಟುವುದಕ್ಕೆ ಆರಂಭಿಸಲು ಕೈಯೊಳಗಿನ ಬಳೆಗಳ ಸಪ್ಪಳವಾಗತೊಡಗಿತು. ಅತಿಥಿಗಳಿಗೆ ಆ ಸಪ್ಪಳವು ಕೇಳಿಸಬಾರದೆಂದು ಆ ಹುಡುಗೆ ಒಂದೊಂದೇ ಬಳೆಯನ್ನು ತೆಗೆದಿರಿಸಲಾರಂಭಿಸಿದಳು. ಒಂದೊಂದು ಕೈಯಲ್ಲಿ ಎರಡೆರಡೇ ಬಳೆಗಳುಳಿದುವು. ಆಗಲೂ ಸಪ್ಪಳವು ನಿಲ್ಲಲಿಲ್ಲ. ಮತ್ತೆ ಒಂದೊಂದು ಬಳೆ ಯನ್ನು ತೆಗೆದಿಟ್ಟಳು. ಆಗಮಾತ್ರ ಸಪ್ಪಳವಾಗಲಿಲ್ಲ. ಲೋಕರಹಸ್ಯವನ್ನು ತಿಳಿದುಕೊಳ್ಳುವ ನಿಮಿತ್ತದಿಂದ ಸಂಚಾರಮಾಡುತ್ತಿದ್ದ ನಾನು ಆ ಕುಮಾರಿ ಯಿಂದ—'ಬಹುಜನರು, ಕೊನೆಗೆ ಇಬ್ಬರು ಕೂಡ ಒಂದು ಕಡೆಗೆ ಇದ್ದರೆ ಅಲ್ಲಿ ಕಲಹವುಂಟಾಗುವುದು; ಆದುದರಿಂದ ಕುಮಾರಿಯ ಬಳೆಯಂತೆ ಏಕಾಕಿ ಯಾಗಿರುವುದು ಲೇಸು' ಎಂಬ ಮಾತನ್ನು ಕಲಿತುಕೊಂಡೆನು.

(೨೧) **ಬಾಣಕಾರ**—ಬಾಣವನ್ನು ಮಾಡುವ ಕೆಲಸದಲ್ಲಿ ಮನಸ್ಸು ಕೊಟ್ಟ ಬಾಣಕಾರನು ಸಮೀಪದಲ್ಲಿ ಹಾಯ್ದುಹೋದ ಅರಸನನ್ನು ಕೂಡ

ಹೇಗೆ ನೋಡಲಿಲ್ಲವೋ ಹಾಗೆ ಏಕಾಗ್ರವಾದ ಮನಸ್ಸನ್ನು ಸಮಾಧಿಯಲ್ಲಿ ತೊಡಗಿಸಿದವನು ಹೊರಗೂ ಒಳಗೂ ಬೇರೆ ಏನನ್ನೂ ವಿಚಾರಿಸನು.

(೨೨) **ಸರ್ಪ**—ಯೋಗಿಯು ಸರ್ಪನಂತೆ ಪರಸಹಾಯನಿರಪೇಕ್ಷನೂ, ಗೃಹರಹಿತನೂ, ಯಾವಾಗಲೂ ಜಾಗರೂಕನೂ, ಜನದ ಕಣ್ಣಿಗೆ ಬೀಳದವನೂ, ಗುಹಾನಿವಾಸಿಯೂ, ಮೌನಿಯೂ ಆಗಬೇಕು. ಗೃಹಾರಂಭವು ದುಃಖಕಾರಣವೂ, ನಿಷ್ಫಲವೂ ಆಗಿರುವುದು. ಸರ್ಪಗಳು ಪರಗೃಹವನ್ನು ಸೇರಿ ಸುಖದಿಂದಲೇ ಇರುವುವು.

(೨೩) **ಜೇಡಹುಳು**—ಜೇಡಹುಳು ತನ್ನ ಹೊಟ್ಟೆಯೊಳಗಿನ ಎಳೆಗಳನ್ನು ತೆಗೆದು ಬಲೆಯನ್ನು ರಚಿಸಿ ಅದರಲ್ಲಿ ಕೆಲಕಾಲವಿದ್ದು ಬಳಿಕ ಆ ಬಲೆಯನ್ನು ಮರಳಿ ತಿಂದು ತನ್ನಲ್ಲಿ ಇಟ್ಟುಕೊಳ್ಳುವಂತೆ ಮಹೇಶ್ವರನು ತನ್ನಿಂದಲೇ ಈ ಸೃಷ್ಟಿಯನ್ನು ನಿರ್ಮಿಸಿ ಕೆಲಕಾಲದ ತರುವಾಯ ಮರಳಿ ತನ್ನೊಳಗೆ ಲಯಮಾಡಿಕೊಳ್ಳುವನು.

(೨೪) **ಕುರುಡಿಕುಠಾರ**–ಕುರುಡೀಕುಠಾರವೆಂಬ ಹುಳು ಬೇರೊಂದು ಕೀಡಿಯನ್ನು ಹಿಡಿದುತಂದು ತನ್ನ ಮನೆಯಲ್ಲಿಡುವುದು. ಆ ಕೀಡಿಯು ಭಯದಿಂದ ಕುರುಡೀಕುಠಾರವನ್ನೇ ಸರ್ವಕಾಲ ಧ್ಯಾನಿಸಿ ಕೊನೆಗೆ ಕುರುಡೀಕುಠಾರವೇ ಆಗುವುದೆಂದು ಜನರು ಹೇಳುವರು. ಹಾಗೆ ಮನುಷ್ಯರು ಭಯದಿಂದಾಗಲಿ, ಪ್ರೇಮದಿಂದಾಗಲಿ, ದ್ವೇಷದಿಂದಾಗಲಿ ಸರ್ವಕಾಲ ಯಾರ ಧ್ಯಾನವನ್ನು ಮಾಡುವರೋ ಅವರ ಸಾರೂಪ್ಯವನ್ನು ಪಡೆಯುವರು. ಆದುದರಿಂದ ಸರ್ವಕಾಲ ಆನಂದವನ್ನೇ ಧ್ಯಾನಿಸುತ್ತಿರಬೇಕು; ಎಂದರೆ ಆನಂದಸ್ವರೂಪರಾಗುವರು.

ಬೇರೆ ಬೇರೆ ಸ್ಥಳಗಳಿಂದ ಬೇರೆ ಬೇರೆ ಮಾತುಗಳನ್ನು ಕಲಿತುಕೊಳ್ಳಬೇಕು; ಎಲ್ಲ ಮಾತುಗಳನ್ನು ಕಲಿಯಲಾಸ್ಪದವಾದ ಒಂದೇ ಸ್ಥಲವು ಸಿಕ್ಕಲಾರದು. ಆದುದರಿಂದಲೇ ಇಂತಹ ಉಪಗುರುಗಳು ಬೇಕು. ಶ್ರೀಮದ್ಭಾಗವತದಲ್ಲಿ—'ಒಬ್ಬ ಗುರುವಿನಿಂದ ಸುಸ್ಪಷ್ಟವಾದ ಮತ್ತು ಸುಸ್ಥಿರವಾದ ಜ್ಞಾನವುಂಟಾಗಲಾರದು.' ಎಂದು ಹೇಳಿದೆ.

———



# ಪ್ರಕಟನೆ.



## ಪ್ರಕೃತ ಲೇಖಕನಿಂದ ರಚಿತವಾದ ಬೇರೆ ಪುಸ್ತಕಗಳು

| | | | |
|---|---|---|---|
| ಜೈನಧರ್ಮಪರಿಭಾಷೆ | .. | .. | ೧—೪—೦ |
| ರಾಮಾಶ್ವಮೇಧಸಾರಸಂಗ್ರಹ | .. | .. | ೧—೦—೦ |
| ದುರ್ಗಸಿಂಹ ಪಂಚತಂತ್ರಸಾರ | .. | .. | ೧—೦—೦ |
| ಹ. ಮುಹಮ್ಮದ ಪೈಗಂಬರ | .. | .. | ೦—೬—೦ |
| ಮೊಹರಮ್ | .. | .. | ೦—೩—೦ |
| ಶೇರಶಹ | .. | .. | ೦—೪—೦ |
| ಭೀಷ್ಮಾಚಾರ್ಯ | .. | .. | ೦—೮—೦ |
| ಸದ್ಗುಣಾದರ್ಶ | .. | .. | ೦—೧೦—೦ |
| ಮದುವೆ | .. | .. | ೦—೨—೦ |
| ಸತಿಯೂ ಸುನೀತಿಯೂ | .. | .. | ೦—೩—೦ |
| ಜೈನಪದ್ಮಪುರಾಣಸಾರ | .. | .. | ೦—೬—೦ |

ಈ ಪುಸ್ತಕಗಳು ಗ್ರಂಥಕರ್ತರಲ್ಲಿಯೂ, ಧಾರವಾಡ, ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿಯೂ ದೊರೆಯುವವು.

